# ಶ್ರೀ ಚಿಕದೇವರಾಜ ಬಿನ್ನಪ

ಅನುವಾದಕ

ಜಿ. ಪಿ. ರಾಜರತ್ನಂ



ಸತ್ಯಶೋಧನ ಪುಸ್ತಕ ಭಂಡಾರ
ಕೋಟೆ, ಬೆಂಗಳೂರು

ಪ್ರಪನ್ನಜನರಾದ

ನನ್ನ

ತಾಯಿ ತಂದೆ
ಅವರಿಗೆ

ಅತ್ತೆ ಮಾವ
ಇವರಿಗೆ

ಈ 'ಚಿಕದೇವರಾಜ ಬಿನ್ನಪ'ದ
ಹೊಸಗನ್ನಡ ಅನುವಾದವನ್ನು
ಭಕ್ತಿಯಿಂದ ಅರ್ಪಿಸುತ್ತೇನೆ

# ಅರಿಕೆ

## ೧

**'ಶ್ರೀ ಚಿಕದೇವರಾಜ ಬಿನ್ನಪ'** ಎಂಬುದು—**ವಿಶಿಷ್ಟಾದ್ವೈತ** ವೆಂದೂ **ಉಭಯವೇದಾಂತವೆಂದೂ** ಪ್ರಸಿದ್ಧವಾಗಿರುವ ಶ್ರೀ ವೈಷ್ಣವ ಸಿದ್ಧಾಂತದ ಸ್ವರೂಪವನ್ನು ತಿಳಿಯುವುದಕ್ಕೆ ತುಂಬ ಅಡಕವಾದ, ಆದರೂ ತಿಳಿಯಾದ ವಿವರಣೆಗಳನ್ನುಳ್ಳ, ಅಪೂರ್ವವಾದಂಥ ಕೈಪಿಡಿ. ಇದನ್ನು ಬರೆದವರು ಶ್ರೀ ಚಿಕದೇವರಾಜ ಒಡೆಯರು, ಕ್ರಿ. ಶ. ೧೬೭೨ ರಿಂದ ೧೭೦೪ರ ವರೆಗೆ ಮೈಸೂರು ದೇಶವನ್ನು ಆಳಿದ ದೊರೆಗಳು.

ಈ ಹಳಗನ್ನಡದಲ್ಲಿನ ಗದ್ಯಗ್ರಂಥವನ್ನು ಮೊದಲು 'ಆರ್ಯಮತ ಸಂಜೀವಿನಿ'ಯಲ್ಲೂ ಅನಂತರ 'ಕಾವ್ಯಕಲಾನಿಧಿ'ಯಲ್ಲೂ ಹಿರಿಯರು ಪ್ರಚುರಪಡಿಸಿದರು. ಕಾಲಕ್ರಮದಲ್ಲಿ ಪ್ರತಿಗಳು ದುರ್ಲಭವಾಗಲಾಗಿ, ಮೈಸೂರಿನ ಶ್ರೀ ಆರ್. ತಿರುನಾರಣ ಐಯಂಗಾರರು ಈಗ ಮೂಲ ವನ್ನು ತಮಿಳು ಮತ್ತು ಇಂಗ್ಲಿಷ್ ಅನುವಾದಗಳ ಸಹಿತವಾಗಿ ಪ್ರಕಟಿ ಸಿದ್ದಾರೆ.

ಈಗ ಇದು ನಾನು ಮಾಡಿರುವ ಹೊಸಗನ್ನಡ ಅನುವಾದ. ಈ ಅನುವಾದದಲ್ಲಿ—ಗದ್ಯಭಾಗವನ್ನು ದಪ್ಪ ಅಕ್ಷರಗಳಲ್ಲೂ ಪದ್ಯಭಾಗ ವನ್ನು ಸಣ್ಣ ಅಕ್ಷರಗಳಲ್ಲೂ ಮುದ್ರಿಸಲಾಗಿದೆ.

ಈ ಅನುವಾದಕ್ಕೆ ಇನ್ನಷ್ಟು ಅನುಕೂಲವಾಗಲೆಂದು ಕೆಲವು ಅನುಬಂಧಗಳನ್ನು ಜೋಡಿಸಿದ್ದೇನೆ. ಅದರಲ್ಲಿ 'ಅರ್ಥಪಂಚಕ'ದ ಮೇಲಿನ ಅನುಬಂಧವನ್ನು ಬರೆಯುವಲ್ಲಿ ಬ್ರಹ್ಮಶ್ರೀ ಆಳ್ಕೊಂಡವಿಲ್ಲಿ ಗೋವಿಂದಾಚಾರ್ಯ ಸ್ವಾಮಿಗಳಿಂದ ಸಂಪಾದಿತವಾದ 'ಪಿಳ್ಳೈಲೋಕಾ ಚಾರ್ಯರ ಅರ್ಥಪಂಚಕ'ದ ಆಂಗ್ಲಾನುವಾದಕ್ಕೆ ಋಣಿಯಾಗಿದ್ದೇನೆ.

ಪುಸ್ತಕದ ಮೊದಲಲ್ಲಿ ಕೊಟ್ಟಿರುವ ಚಿಕದೇವರಾಜರವರ ಚಿತ್ರದ ಪಡಿಯಚ್ಚಿಗಾಗಿ ನಮ್ಮ ಕನ್ನಡಸಾಹಿತ್ಯ ಪರಿಷತ್ತಿಗೆ ನಾನು ಋಣಿ.

೨

ಮೂಲದ ಬಿಗಿಯನ್ನೂ ಅಚ್ಚುಕಟ್ಟನ್ನೂ ನೋಡಬಯಸುವವರಿಗಾಗಿ 'ಪೀಠಿಕೆ'ಯಿಂದ ಕೆಲವು ಭಾಗಗಳನ್ನು ಇಲ್ಲಿ ಸಂಗ್ರಹಿಸಿದೆ:

ಶ್ರೀರಮಣನಖಿಲಸದ್ಗುಣ
ವಾರಿಧಿಯಾನಂದಮಯವಿಮಾನೋದರವಿ
ಸ್ಫಾರಿತರೂಪಂ ಯದುಗಿರಿ
ನಾರಾಯಣನಾಳ್ದನಕ್ಕೆ ನರಪತಿಗನಿಶಂ

ಆನಂದೈಕರಸಂ ಸಮಸ್ತಜಗದಾನಂದಂಗೆ ಚಕ್ರಾಯುಧಂ
ಸೇನಾಚಕ್ರವಿಮರ್ದಿತಾಹಿತಮಹೀಚಕ್ರಂಗೆ ವೈಕುಂಠನ
ನ್ಯೂನೋಪಾಯವಿಕುಂಠಿತಾರಿಧರಣೀಭೃದ್ದುರ್ಗವರ್ಗಂಗೆ ಲ
ಕ್ಷ್ಮೀನಾರಾಯಣನೀವನಕ್ಕೆ ಚಿಕದೇವೇನ್ದ್ರಂಗೆ ಸಾಮ್ರಾಜ್ಯಮಂ

ನೆರೆದು ಸುರಾಸುರರ್ ಶರಧಿಯಂ ಕಡೆಯುತ್ತಿರೆಯೆಂಟುದಿಕ್ಕಿನೊಳ್
ತೆರೆ ಕವಿದೆಯ್ದೆ ನುರ್ಗುನುಸಿಗೆಯ್ದು ಪಳಂಚುವ ಮಂದರಾದ್ರಿವೋಲ್
ಪಿರಿಕಿಱಿದೆನ್ನದೆಣ್ದೆಸೆಯ ಮನ್ನೆಯರೊಱ್ಗನೊಳೊನ್ದುವೇಳೆಯೊಳ್
ಪರಿತರೆ ಪೊಯ್ದುಪೊಯ್ದು ಭರದಿಂ ಬಱಗೆಯ್ದನಭೇದ್ಯವಿಕ್ರಮಂ

ಒಂದು ದೆಸೆಯೊಳ್ ತುರುಕರೊನ್ದುಕಡೆಯೊಳ್ ಮೊಱಸ
ರೊಂದೆಸೆಯೊಳಾರೆಯರ ಬಿಂದಮಳವಿಂ ಬೇ
ರೊಂದು ಬಱಯೊಳ್ ತಿಗುಳರೊಂದಿರವಿನೊಳ್ ಕೊಡಗ
ರೊಂದುಕೆಲದೊಳ್ ಮಲೆವರೊಂದುವೆರೆದೆಲ್ಲರ್
ಸಂದಣಿಸಿ ಕಾಳೆಗಕೆ ಮುಂದುವರಿವನ್ನಮದ
ಟಿಂದವರ ತಟ್ಟುಗಳ ಪಂದಲೆಗಳಂ ದಿಗ್
ಬೃಂದಬಲಿಯಿತ್ತು ನಲವಿನ್ದೆ ಚಿಕದೇವನೃಪ
ನಂದಮಿಗೆ ಪೆರ್ಜಸಮನೊಂದಿ ಸೊಗವಾಱ್ಗಂ

ಶ್ರೀಪತಿಯ ಸೇವೆಯೆಂದೇ
ಈ ಪರಿಯೊಳ್ ಕ್ಷಾತ್ರಧರ್ಮಮೆಸಗುತೆ ಶಾಸ್ತ್ರ

ಲಾಪಂಗಳ ತತ್ತ್ವಾರ್ಥಗನಿ
ರೂಪಣದಿಂ ಪೊಟ್ಟುಗಳೆವನಪ್ರತಿಮಾಂಕಂ

ಓದಿ ತಿಳಿದೊಳ್ಪಿನಿಂದಂ
ವೇದಾಂತದ ತತ್ತ್ವಗತಿಯನೆಲ್ಲರುಮಱಿವಂ
ತಾದರದಿಂದಪ್ರತಿಮಂ
ಯಾದವಗಿರಿಯೊಡೆಯನಡಿಗೆ ಬಿನ್ನತಿಗೆಯ್ದಂ

ಮೂವತ್ತುಂ ಬಿನ್ನಪದಿಂ
ದಾ ವೇದಾನ್ತಾರ್ಥತತ್ತ್ವಮನಿತುಂ ಸೊಗದೊಳ್
ಭಾವನೆಗೆ ಬರ್ಪಿನಂ ಚಿಕ
ದೇವಂ ಯದುಶೈಲನಾಥನಡಿಗುಸಿರ್ದನಿದಂ

ಕ್ಷಿಪ್ರದೊಳೆಲ್ಲರುಮಱಿವಂ
ತಪ್ರತಿಪತ್ತ್ಯಾದಿದೋಷಮಂ ಕಳೆದೊಳ್ಪಿಂ
ದಪ್ರತಿಮವೀರನರಪತಿ
ಯಪ್ರಾಕೃತನಡಿಗೆ ಮಣಿದು ಬಿನ್ನತಿಗೆಯ್ದಂ

ಅದೆನ್ತೆನೆ—

ಸ್ವಸ್ತಿ ಶ್ರೀಮನ್ಮಹಾರಾಜಾಧಿರಾಜಂ ರಾಜಪರಮೇಶ್ವರಂ ಪ್ರೌಢಪ್ರತಾಪನಪ್ರತಿಮವೀರನರಪತಿ ಶ್ರೀ ಚಿಕದೇವಮಹಾರಾಯಂ ಶ್ರೀರಂಗಪಟ್ಟಣದೊಳ್ ಸಿಂಹಾಸನಾರೂಢನಾಗಿ ಸಾಮ್ರಾಜ್ಯದೀಕ್ಷೆಯಂ ತಳೆದು ದೇವಬ್ರಾಹ್ಮಣಪರಿಪಾಲನಮಂ ಪ್ರಧಾನಂಗೆಯ್ದು ಸಕಲ ಪ್ರಜೆಗಳಂ ಪಾಲಿಸುತ್ತಿರ್ಪಿನಂ . . . ಈ ತೆಱದೊಳೆಣ್ದೆಸೆಯುಂ ಗೆಲ್ದು ಸುಖಸಂಕಥಾವಿನೋದದಿಂದಿರುತ್ತೆ ಚಿತ್ತದೊಳ್ ದಯಾರಸಮುಣ್ಮೆಯಾಳೋಚಿಸಿದನ್ ಎಣ್ದೆಸೆಯ ಪಗೆಗಳಡಂಗಿದುದಱಿಂ ಪ್ರಜೆಗಳ್ಗೆ ರಾಜಕಭಯಮಿಲ್ಲದೆಯುಮಿರ್ಪುದಱಿಂ ಪ್ರಜೆಗಳನಿಬರುಂ ಇಹದೊಳ್ ಸೊಗವಾಳ್ದಪರ್ ಇವರ್ಗೆ ಪರಗತಿಯುಮಂ ಸಂಪಾದಿಸವೇಳ್ಪುದೆನ್ದಾರಯ್ದು

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ
ಯೇಽಪಿ ಸ್ಯುಃ ಪಾಪಯೋನಯಃ
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಃ
ತೇಽಪಿ ಯಾನ್ತಿ ಪರಾಂಗತಿಮ್

ಎಂದು ಗೀತೆಯೊಳ್ ಶ್ರೀಕೃಷ್ಣಂ ತಾನೇ ನಿರೂಪಿಸಿದ ತೆಱದೊಳ್ ಪಿಂತಣ್ಗೆನಿತಾನುಂ ಪಾಪಿಗಳಾದೊಡಂ ಆವ ಜಾತಿಯೊಳ್ ಪುಟ್ಟಿದೋರ್ಡಮೀಗಳುಂ ತತ್ತ್ವಜ್ಞಾನದಿಂ ತನ್ನೊಳ್ ಭಕ್ತಿಗೆಯ್ದು ನಂಬಿದವರ್ಗೆ ಮುಕ್ತಿ ತಪ್ಪದೆಂದೆಣಿಸಿ, ಅಕ್ಕರಮನಱಿಯದೊಕ್ಕಲಿಗರ್ಗಂ ಪೆಣ್ಗಳ್ಗಂ ಸಕ್ಕದದಿಂ ತತ್ತ್ವಜ್ಞಾನಮಪ್ಪುದರಿದು ಎಂದು—ಎಲ್ಲರುಮಱಿವಂತೆ ಕನ್ನಡವಾತಿನೊಳಂ ಮೆಲ್ನುಡಿಗಳಿಂದೆ ಅಖಿಲತತ್ತ್ವಾರ್ಥಂಗಳಂ ಸಂಗತಿಗೊಳಿಸಿ ತಾನ್ತನ್ನ ಕುಲದೇವತೆಯಪ್ಪ ಯಾದವಗಿರಿನಾರಾಯಣನಡಿದಾವರೆಗಳ್ಗೆ ಬಿನ್ನಪಂಗೆಯ್ವ ನೆವದೊಳ್ ಮೂವತ್ತುಂ ಬಿನ್ನಪಂಗಳಂ ಪವಣ್ಗೆಯ್ದಂ ಅವಱಲ್ಲಿ—

ಶ್ರೀಪತಿ ಲೋಕಕರ್ತೃ ನಿಗಮಸ್ತುತನದ್ಭುತವೈಭವಂ ಜಗ
ದ್ರೂಪನಸಾಧ್ಯಸಾಧಕನಶೇಷಸಮಂ ಪರತತ್ತ್ವನುಂ ಪೃಥ
ಗ್ರೂಪವಿಚಿತ್ರಕರ್ಮಫಲದಾಯಕನೆಂದು ಮಹೀಮಹೇಂದ್ರನೊ
ಲ್ದೀಪರಿ ದೈತ್ಯವೈರಿಗೊರೆದಂ ಪದಿನೆಂಟುಮುದಾರಗದ್ಯದೊಳ್

ಪದಿನಾಲ್ಕುಂ ಲೋಕಮುಂ ಭಾವಿಸೆಯಸುಖಮನಿತ್ಯಂ ಪರಬ್ರಹ್ಮಮೊಂದೇ
ವಿದಿತಂ ನಿತ್ಯಾಮಿತಾನಂದಮಯಮೆನಿಪ ಘಂಟಾರ್ಥಮಂ ಭಾವಿಸಲ್ಕೀ
ಪದದೊಳ್ವೈರಾಗ್ಯಮುಂ ಮೋಕ್ಷದೊಳೆಱಕಮುಮಕ್ಕುಂ ಬುಧರ್ಗೆಂದು ಮಿಕ್ಕುಂ
ಮುದದೊಳ್ ಪ್ರೌಢಪ್ರತಾಪಂ ಸನಕಮುನಿಸಮಾರಾಧಿತಂಗೊಲ್ದು ಪೇಳ್ದಂ

ಈರಾಱುಂ ಗದ್ಯದೊಳಿ
ನ್ನೋರಂತೆಯೆ ಮುಕ್ತ್ಯುಪಾಯಮಂ ಮೋಕ್ಷಮುಮಂ

ಸೂರಿಸಮಾಜಂ ಸೈಯೆನೆ
ನಾರಾಯಣನಡಿಗಭೇದ್ಯವಿಕ್ರಮನುಸಿರ್ದಂ

೩

ಈ ಕೃತಿಯಲ್ಲಿ ಮೂವತ್ತು 'ಬಿನ್ನಪ'ಗಳಿವೆಯಷ್ಟೆ. ಪ್ರತಿಯೊಂದು ಬಿನ್ನಹದಲ್ಲಿ ವಿವರಿಸಿರುವ ವಸ್ತುವನ್ನು ಸೂತ್ರಪ್ರಾಯವಾಗಿ ಆಯಾ ಬಿನ್ನಹದ ಮೊದಲಿನ ಒಂದೊಂದು ಕಂದಪದ್ಯದಲ್ಲಿ ನಿರೂಪಿಸುವುದು ಇದರ ರಚನೆಯ ಒಂದು ವೈಶಿಷ್ಟ್ಯ. ಆ ಮೂವತ್ತು ಕಂದಪದ್ಯಗಳನ್ನು, ಬೇಕೆನ್ನುವವರಿಗಾಗಿ, ಮುಂದೆ ಸಂಗ್ರಹಿಸಿದೆ:

ಪರವಾಸುದೇವ ಭಕ್ತರ
ಪೊರೆಯಲ್ ವ್ಯೂಹಾದಿಭಾವಮಂ ತಳೆದೈಯೆಂ
ದೊರೆದು ಯದುಶೈಲನಾಥನ
ಚರಣಾಬ್ಜಕೆ ಬಿನ್ನವಿಸಿದನಪ್ರತಿಮಾಂಕಂ ೧

ಸಿರಿಯುರಸ ನೀನೆ ಜಗಮಂ
ಪರಿವಿಡಿಯಿಂ ಪಡೆದು ಪೊರೆದು ಪೊಡೆಯೊಳ್ ಕೊಳ್ವೈ
ಪರಬೊಮ್ಮಮದಱಿನೆಂದೀ
ನರಪತಿ ಯದುಗೋತ್ರಪತಿಗೆ ಬಿನ್ನತಿಗೆಯ್ದಂ ೨

ಅಗಣಿತ ಕಲ್ಯಾಣಗುಣಾ
ದಿಗಳಿಂತೆಂದಳವುಗೆಯ್ಯಲರಿದಾದೊಡಮೇಂ
ಬಗೆವುಗುವೈ ನೀನೆಂದಾ
ಜಗದಾಣ್ಮಂಗಣ್ಮಿನಾಣ್ಮನೆಱಕದೊಳೊಱೆದಂ ೩

ವೇದ ತದೇಕಾರ್ಥಪುರಾ
ಣಾದಿಗಳೊಳ್ ವ್ಯಕ್ತಮಾಗಿ ತೋರ್ಪೈ ನೀನೆಂ
ದಾದರದಿಂದೆ ಸುಶೀಲಂ
ಯಾದವಗಿರಿನಾಥನಡಿಗೆ ಬಿನ್ನತಿಗೆಯ್ದಂ ೪

ಸಕಲಜಗದ್ವ್ಯಾಪಾರಂ
ಸಕಲಾತ್ಮಕ ನಿನ್ನದಾಗೆ ವೇದಂ ಸಕಲಂ
ಪ್ರಕಟಿಪುದು ನಿನ್ನನೆಂದಾ
ಸುಕಲಂ ಯದುಶೈಲಪತಿಗೆ ಬಿನ್ನತಿಗೆಯ್ದಂ ೫

ಪಡಿಬರಿಸಿ ತೋರ್ಪ ವೇದದ
ನುಡಿಗಳುಮವಿರುದ್ಧಮಕ್ಕುಮುಪದೇಶದೊಳಿಂ
ದಡಿಗೆಱಗಿ ಬಿನ್ನವಿಸಿದಂ
ಪೊಡೆಯಲರಂಗರಿನೃಪಾಲಮಸ್ತಕಶೂಲಂ ೬

ನನ್ನಿ ಜಗಮೆಲ್ಲಮುಂ ಕೇಳ್
ನಿನ್ನೊಡಲಾಗಿರ್ಪ ಬಗೆಯೊಳೆಂದು ಯದುಕ್ಷ್ಮಾ
ಭೃನ್ನಾಥನಡಿಗೆ ನಲವಿಂ
ಬಿನ್ನತಿಗೆಯ್ದೆಸೆದನೊಲ್ದು ನನ್ನಿಯ ನಲ್ಲಂ ೭

ಕನಸಿನೊಳೀಕ್ಷಿಪ ವಸ್ತುಗ
ಳನಿತುಂ ನೀಂ ಸೃಷ್ಟಿಗೆಯ್ದ ಬಗೆಯಿಂ ದಿಟಮೆಂ
ದನುಗೊಳಿಸಿ ಬಿನ್ನವಿಸಿದಂ
ಮನವೊಲ್ದುಸುರಾರಿಯಡಿಗೆ ಮಲೆವರ ಗಂಡಂ ೮

ಮಿತಿಗೆಯ್ದ ಕರ್ಮಗತಿಯಂ
ಜತೆಗೊಂಡೇ ಸೃಷ್ಟಿಗೆಯ್ವ ನೀಂ ಸರ್ವಸಮಂ
ಸತಮೆಂದು ಶೌರಿಯೊಳ್ ಬಿ
ನ್ನತಿಯಂ ಲೋಕೈಕವೀರನೊರೆದುಱೆ ನೆಗಲ್ದಂ ೯

ಪರಿಪರಿಯ ಜಗಕೆ ಮೂಱುಂ
ಪರಿಯೆನಿಸುವ ಕಾರಣಂಗಳುಂ ನೀನೆಂದಾ
ಬಿರುದಂತೆಂಬರಗಣ್ಡಂ
ಮುರವೈರಿಯ ಪದಕೆ ಮುದದೆ ಬಿನ್ನತಿಗೆಯ್ದಂ ೧೦

ಊಹಿಸೆ ಜೀವನ ಚೇತನ
ದೇಹಾದಿಗಳತ್ತಣಿಂದಮನ್ಯಂ ದಿಟಮೆಂ
ದೀಹದನಂ ಶೌರಿಗೆ ತಾ
ನಾಹವಮಲ್ಲಾಂಕನೊಲ್ದು ಬಿನ್ನತಿಗೆಯ್ದಂ ೧೧

ನಿನ್ನಿಚ್ಛಾಮಾತ್ರದೊಳೀ
ಮುನ್ನೆಗಲ್ದುದು ತತ್ತ್ವಸೃಷ್ಟಿಯೆನ್ದು ಯದುಕ್ಷ್ಮಾ
ಭೃನ್ನಿಧಿಯ ಪಾದಪಂಕಜ
ಸನ್ನಿಧಿಯೊಳ್ ಬೊಜಗದಲ್ಲಣಂ ನಿರವಿಸಿದಂ ೧೨

ಪಲವುಮಜಾಣ್ಡಂಗಳ ನೀಂ
ಜಲಬುದ್ಬುದದನ್ತೆ ಪೊಣ್ಮಿಪ್ಪೈಯೆಂದೊಱೆದಂ
ಜಲರುಹನಾಭನ ಮೆಲ್ಲಡಿ
ಗೊಲವಿಂ ಸಂಗ್ರಾಮರಾಮನೊಳ್ ಬಿನ್ನಪಮಂ ೧೩

ಅನಿತುಂ ಕರ್ಮಫಲಂಗಳ
ನನುಭವಿಸುವ ತಾಣಮಾದ ಭುವನಂಗಳ ನೀ
ನನುಗೊಳಿಸಿದಪ್ಪೈಯೆಂದಾ
ದನುಜಾರಿಗೆ ಪೇಳ್ದನೊಲ್ದು ಗಣ್ಡರಗಣ್ಡಂ ೧೪

ಅರ್ಣವ ಭೂಧರ ತಟನೀ
ಕೀರ್ಣಧರಾವಲಯಮನಿತುಮಂ ಸಮೆದೈ ನೀಂ
ನಿರ್ಣೀತಮೆಂದು ಶೌರಿಗೆ
ಕರ್ಣಾಟಕಚಕ್ರವರ್ತಿ ಬಿನ್ನತಿಗೆಯ್ದಂ ೧೫

ಮೇದಿನಿಯೊಳೆಸೆವ ಸಗ್ಗದ
ಭೇದಂಗಳನುಂಟುಮಾಡಿದೈ ನೀನೆಂದಾ
ಕೈದುವಿಡಿದರೊಳ್ಗಣ್ಡಂ
ಯಾದವಗಿರಿನಾಥನಡಿಗೆ ಬಿನ್ನತಿಗೆಯ್ದಂ ೧೬

ನರಕದೊಳಿಱುವರೆ ತಾವಕ
ಚರಣಾಬ್ಜಕೆ ಮಣಿದರಲ್ತು ಮುನ್ನೊರ್ಮೆಯಮಂ
ದುರುವಿಕ್ರಮನಡಿದಾವರೆ
ಗರಿನೃಪವೇಶ್ಯಾಭುಜಂಗನನುಗೊಳೆ ಪೇೞ್ದಂ ೧೭

ಉದ್ಧತ ಪಾಪಿಗಳುಂ ಪರಿ
ಶುದ್ಧರ್ ನಿನ್ನಡಿಯ ನೆನೆದಮಾತ್ರದೊಳೆಂದಾ
ಸಿದ್ಧಗರುಡಧ್ವಜಾಙ್ಕಂ
ಸಿದ್ಧಾರ್ಚಿತಪದಯುಗಂಗೆ ಬಿನ್ನತಿಗೆಯ್ದಂ ೧೮

ಮುಕ್ತಿಯೊಳಾಸೆಯುಮಿತರವಿ
ರಕ್ತಿಯುಮನುಗೂಡಿದವರ್ಗೆ ಮೋಕ್ಷೋಪಾಯಂ
ಯುಕ್ತಮೆನೆ ಪೇೞ್ದನನಿತರ
ಭಕ್ತಕುಟುಂಬಂಗೆ ಮಣಿದು ಚಿಕದೇವೇಂದ್ರಂ ೧೯

ಸಾತ್ತ್ವಿಕಶಾಸ್ತ್ರಂಗಳೊಳೇ
ತತ್ತ್ವಂ ನಿರ್ಣೀತಮಕ್ಕುಮೆಂದಾದರದಿಂ
ಸಾತ್ವನಿಧಿಯಡಿಗೆ ವೈಷ್ಣವ
ತತ್ತ್ವೋದ್ಧರಣಪ್ರವೀಣನೊಳ್ಪಿಂದೊರೆದಂ ೨೦

ಯೋಗಂ ಸಾಂಖ್ಯಂ ಪಾಶುಪ
ತಾಗಮಮಿನಿತರ್ಕೆ ಪಾಂಚರಾತ್ರಂ ಪಿರಿದೆಂ
ದಾಗೋವಿಂದನೊಳುಸಿರ್ದಂ
ರಾಗದೆ ದುರ್ಮತವಿಮರ್ದನದ್ಭುತಚರಿತಂ ೨೧

ಆರಯೆ ವಿಷಯಾವಳಿಯೊಳ್
ವೈರಾಗ್ಯಂ ಸುಲಭಮೊಳ್ಪನಱುವರ್ಗೆಂದಾ
ಸೂರವಡೆಸೂಱೆಗಾಱಂ
ಸಾರಸಭವಸನ್ನುತಂಗೆ ಬಿನ್ನತಿಗೆಯ್ದಂ ೨೨

ಸಲ್ಲದು ಕೇವಲಕರ್ಮಂ
ಬಲ್ಲರ ಮತದಿಂದೆ ಮುಕ್ತಿಮಾರ್ಗಕ್ಕೆಂದಾ
ಬಲ್ಲರ ಬಲ್ಲಹನೊಲವಿಂ
ಮೆಲ್ಲಡಿಯೊಳ್ ಮಣಿದು ಹರಿಗೆ ಬಿನ್ನತಿಗೆಯ್ದಂ ೨೩

ಔದಾಸೀನ್ಯದೊಳಿತರಮು
ನಾದರದಿಂ ಮುಕ್ತಿಪದಮನೀವೈ ನೀನೆಂ
ದಾ ದೇವದೇವನಂಘ್ರಿಗೆ
ಯಾದವನಾರಾಯಣಾಂಕನೊಲವಿಂದೊರೆದಂ ೨೪

ಫಲಮುಪ್ಪುದು ನಿನ್ನಿಂದಮೆ
ಪಲತೆಱದೊಳ್ ಪೆಱತಿನಲ್ತು ದಿಟಮೆಂದೊರೆದಂ
ನಲವಿಂ ಸತ್ಯಪರಾಕ್ರಮು
ನಲಸದೆ ಕಲ್ಯಾಣತೀರ್ಥನಿಲಯನ ಪದದೊಳ್ ೨೫

ಸರ್ವರನೋವುವನುಂ ನೀ
ನೊರ್ವನೆ ಪೆಱರಾರುಮಾರ್ಪರಲ್ತೆಂದೊರೆದಂ
ನೀರ್ರ್ವವಸಿಱನ ಪಾದಕೆ
ಪೆರ್ವಗೆದಱವೇಂಟಿಕಾಱನಾದರದಿಂದಂ ೨೬

ತನ್ನಿರವಿಂ ತಾನಳ್ಕದೆ
ನಿನ್ನಿರವಂ ತಿಳಿವನಳವುಗೊಂಬಂ ದಿಟಮೆಂ
ದುನ್ನತಮುಹಿಮುಂಗೊರೆದಂ
ಮನ್ನೆಯು ಬಲ್ವಗೆಯ ಬಂದಿಕಾಱಂ ನಲವಿಂ ೨೭

ಮಾಯಾತತ್ಕಾರ್ಯಂಗಳ
ನೀಯೆಡೆಯೊಳ್ ಬಿಡಿಸಿ ಸಲಪುವೈ ನೀನೆಂದಾ
ಮಾಯಿಮುರಾಟರ ಗಣ್ಡಂ
ಮಾಯಾತೀತಂಗೆ ಮಣಿದು ಬಿನ್ನತಿಗೆಯ್ದಂ ೨೮

ಸಿರಿಯು ನೆಲೆ ಸಿದ್ಧ ಭೋಗ್ಯಂ
ನಿರವದ್ಯಂ ನಿನ್ನ ದಿವ್ಯವಿಗ್ರಹಮೆಂದಾ
ಧರಣೀವರಾಹಬಿರುದಂ
ಚರಣಾಬ್ಜಕೆ ಮಣಿದು ಚೆಲ್ವರಾಯಂಗೊರೆದಂ ೨೯

ಶ್ರೀನಾಥ ನಿತ್ಯನಿರವಧಿ
ಕಾನನ್ದಾನನ್ತ ನಿನ್ನ ಸೇವೆಯೆ ಫಲಮೆಂ
ದಾ ನಿರ್ಮಲನಡಿಗೊರೆದಂ
ನಾನಾವಿಧಮಕುಟಮಂಡಲೀಕರಗಣ್ಡಂ ೩೦

೪

ಹೀಗೆ 'ವೈಷ್ಣವ ತತ್ತ್ವೋದ್ಧರಣ ಪ್ರವೀಣ'ರೆನಿಸಿದ ಶ್ರೀ ಚಿಕದೇವರಾಜ ಒಡೆಯರ 'ಬಿನ್ನಪ'ದ ಈ ಹೊಸಗನ್ನಡ ಅನುವಾದವು ವೈಷ್ಣವ ತತ್ತ್ವದಲ್ಲಿ ಪ್ರೀತಿಯುಳ್ಳವರಿಗೆ ಪ್ರಿಯವಾಗಲಿ.

ಯುಗಾದಿ, ೧೯೫೦.
ಮಲ್ಲೇಶ್ವರ, ಬೆಂಗಳೂರು

ಜಿ. ಪಿ. ರಾಜರತ್ನಂ

# ಶ್ರೀ ಚಿಕದೇವರಾಜ ಬಿನ್ನಪ

ನಿನ್ನವರೆನಿಪ ಪಿರಿಯರ್ ಪಲರ್ಕ್ಳಿಯಿಂ ಕಲಿಸೆ
ಒನ್ದೊನ್ದು ನುಡಿಯುಂ ಕಲ್ತೋದುವ ಗಿಳಿವಱಿಯನ್ತೆನ್ನ ನುಡಿಗೆ
ಚಿತ್ತದೊಳ್ ಸಂತಸಂಬಡುವುದು ಸಂತಸಂಬಡುವುದು
ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ

—ಬಿನ್ನಹ ಹತ್ತು—

# ವಿವರ

# ಶ್ರೀ ಚಿಕದೇವರಾಜ ಬಿನ್ನಪ

## ಪೀಠಿಕೆ

ಶ್ರೀರಮಣನೂ ಅಖಿಲಸದ್ಗುಣವಾರಿಧಿಯೂ ಆನಂದಮಯವಾದ ವಿಮಾನದ ಉದರದಲ್ಲಿ ವಿಸ್ಫಾರಿತವಾದ ರೂಪುಳ್ಳವನೂ ಆದ ಯದುಗಿರಿ ನಾರಾಯಣನು ನರಪತಿಗೆ ಯಾವಾಗಲೂ ಒಡೆಯನಾಗಲಿ.

ಆನಂದೈಕರಸನು ಸಮಸ್ತಜಗದಾನಂದನಿಗೆ, ಚಕ್ರಾಯುಧನು ಸೇನಾಚಕ್ರದಿಂದ ವಿಮರ್ದಿತವಾದ ಅಹಿತಮಹೀಚಕ್ರನಿಗೆ, ವೈಕುಂಠನು ಅನ್ಯೂನೋಪಾಯದಿಂದ ವಿಕುಂಠಿತವಾದ ಅರಿಧರಣೀಭೃತ್‌ದುರ್ಗವರ್ಗನಿಗೆ, ಲಕ್ಷ್ಮೀನಾರಾಯಣನು ಚಿಕದೇವೇಂದ್ರನಿಗೆ ಸಾಮ್ರಾಜ್ಯವನ್ನು ಕೊಡುವನಾಗಲಿ.

ಶ್ರೀಮದ್ಯಾದವಶೈಲವಲ್ಲಭನ ಪದಾಂಭೋಜಾತದಲ್ಲಿ ಭೃಂಗವಾದವನು, ಗುಣಗಳಿಗೆ ಆರಾಮನಾದವನು, ಪಶ್ಚಿಮರಂಗಧಾಮನಗರೀ ಸಿಂಹಾಸನಾಧೀಶನು, ಉದ್ದಾಮವಾದ ಶ್ರೀ ಯದುವಂಶವೆಂಬ ಕಲ್ಪತರುವಿಗೆ ಪ್ರೌಢಪ್ರವಾಳವಾದವನು, ಮಹೀಚಂದ್ರಮನಾದ ಚಿಕದೇವೇಂದ್ರನು ಜಗತ್ಪ್ರೇಮವನ್ನು ಪಡೆದು ನೆಗಳಲಿ, ಬಾಳಲಿ.

ಮಯನೋ ಶಂಬರನೋ ರಾವಣನ ಮಗನೋ ಮಾರೀಚನೋ ಎನ್ನುವ ಹಾಗೆ ಭಯದಿಂದ ಆಗರೆ ಢಿಳ್ಳಿ ಭಾಗನಗರ ಪ್ರಾಂತಗಳಲ್ಲಿನ ನಾಡಿಗರು 'ಜಯ ಜೀಯಾ' ಎಂದು ಇದಿರಿಗೆ ಇಟ್ಟ ಕಪ್ಪದ ಒದವಿನಿಂದ ಪೆಂಪು ಮಿರಿಬಂದ ಆ ಶಿವಾಜಿಯ ಸೊಕ್ಕನ್ನು ಮುರಿದು ಇಕ್ಕಿ ಅಪ್ರತಿಮವೀರ ಎಂಬ ಅಭಿಖ್ಯೆಯನ್ನು ತಾಳಿದನು.

ಢಿಳ್ಳಿಯ ಬಾಗಿಲಿಗೆ ಹರಿದು ಕೊಳ್ಳೆಯನ್ನು ಕೊಂಡು, ಗೋಲಕೊಂಡೆಯನ್ನು ಚೆನ್ನಾಗಿ ಜಳ್ಳಿಸಿ, ವಿಜಯಾಪುರವನ್ನು ಒಕ್ಕಲಿಕ್ಕಿ ಬರಿದುಮಾಡಿ, ಸೊಕ್ಕಿನಿಂದ ಅಳ್ಳಿರಿವ ಆ ಶಿವಾಜಿಯ ಮಗನಾದ ಶಂಭುಜಿಯ ಹೆಗ್ಗಿಯನ್ನೂ ಉಬ್ಬುಕೊಬ್ಬನ್ನೂ ಚಿಕದೇವಭೂವರನು ಅದ್ಭುತ ಪರಾಕ್ರಮದಿಂದ ತೆಳ್ಳನೆಗೆಯ್ದನು.

ಯಶವಂತರಾವುವಿನ ಮೂಗನ್ನು ಕೊಯ್ದು ಅವನಿಗೆ ಅಸ್ತ್ರಸಂನ್ಯಾಸವನ್ನು ಕೊಟ್ಟು, ಲೋಗರು ಭಾಪೆನ್ನುವಂತೆ ಆ ಜೈತಜೀಘಾಟೆಯನ್ನು ಹೊಯ್ದು ಚಿತ್ರವಧೆಗೆಯ್ದು, ಬೇಗನೆ ದಾವಜಿ ಕಾಕಡನೆಂಬವನ ಅಣಲನ್ನು ಕೊಯ್ದು, ಎಲ್ಲ ದೇಶಕ್ಕೂ ಉದ್ವೇಗವು ಹೋಗುವಂತೆ ಅಪ್ರತಿಮವೀರನು ಮೇದಿನೀಚಕ್ರವನ್ನು ಆಳಿದನು.

ಸುರರೂ ಅಸುರರೂ ನೆರೆದು ಶರಧಿಯನ್ನು ಕಡೆಯುತ್ತಿರಲು ಎಂಟು ದಿಕ್ಕಿನಲ್ಲೂ ತೆರೆ ಕವಿದು ಬರಲು ನುಗ್ಗುನುಸಿಮಾಡಿ ತಾಗುವ ಮಂದರಪರ್ವತದ ಹಾಗೆ,

ಹಿರಿದು ಕಿರಿದು ಎನ್ನದೆ ಎಂಟು ದೆಸೆಯ ಮನ್ನೆಯರು ಒಗ್ಗಿನಿಂದ ಒಂದು ವೇಳೆಯಲ್ಲಿ ಓಡಿಬರಲು, ಅಭೇದ್ಯವಿಕ್ರಮನು ಹೊಯ್ದು ಹೊಯ್ದು ಭರದಿಂದ ಬರಿದು ಮಾಡಿದನು.

'ಬಳಸಿಕೊಂಡು ಒಂದುಗೂಡಿ ಓಡಿಬಂದ ರಿಪುಕ್ಷಿತಿಪಾಲವರ್ಗವನ್ನು ಘಳಿಲನೆ ಹೊಯ್ದನು' ಎಂದರೆ ಅದು ಅಪ್ರತಿಮನಿಗೆ ಹೆಮ್ಮೆಯೆ! 'ಎದುರಿಸಿದ ಆ ಬಲಯುತರಾದ ಸಮರ್ಥ ಕುತುಪಶಾಹನನ್ನೂ ಏದುಲಶಾಹನನ್ನೂ ಸಂಪೂರ್ಣವಾಗಿ ಮುಳುಗಿಸಿ, ಚಿಕದೇವ ಭೂವರನು ಮಹಿಮೆ ಪಡೆದನು' ಎಂದರೆ ಒಪ್ಪುತ್ತದೆ!

ಢಿಳ್ಳಿಯಾಳುವ ದೊರೆಯನ್ನು ತಡಮಾಡದೆ ಕರೆತಂದು, ಆವನ ದೆಸೆಯಿಂದಲೇ ತೋಳುಬಳೆಯನ್ನು ಪಡೆದ ಭಾಗನಗರಾಧಿಪನನ್ನೂ ವಿಜಯಾಪುರೇಶನನ್ನೂ ಬಾಣ್ಗಿ ಗಾವೆನ್ನುವಂತೆ ಹಿಡಿದು ಕೈಸೆರೆಗೊಂಡು, ಚಿಕದೇವ ನರೇಂದ್ರಚಂದ್ರನು ಅಭೇದ್ಯ ವಿಕ್ರಮನೆನ್ನುವಂತೆ ಪಾಡುಪಂತದಿಂದ ಬಾಳುವನು.

ಅಂದು ಇವನಿಂದ ಹೆದರಿ ಭಯದಿಂದ ಮರೆಬಿದ್ದ ನೃಪವಂದವನ್ನು ಆನುವಿಂದ ಹೇಳಲು, ಅವನು ಅವರೊಡನೆ ಕೂಡಿ ಮೋಸದಿಂದ ಸಂದಣಿಯ ಕಾಳಗದಲ್ಲಿ ಒಂದಿಷ್ಟು ಮುಂಬರಿಯಲು—ಹಾವುಗಳ ಗೊಂದಳದಿಂದ ಪಿಷ್ಣುಸ್ಯಂದನದ ರೀತಿಯಲ್ಲಿಯೇ ಕೊಂಡು ಕೊಲೆಯಾಡಿದ ಅಳವಿನಿಂದ ಚಿಕದೇವನೃಪನು ಇಂದು ಸುಖದಿಂದ ಬಾಳುವನು.

ಒಂದು ದಿಕ್ಕಿನಲ್ಲಿ ತುರುಕರು, ಒಂದು ಕಡೆಯಲ್ಲಿ ಮೊರಸರು, ಒಂದು ದಿಕ್ಕಿನಲ್ಲಿ ಆರೆಯರ ವೃಂದ, ಬೇರೊಂದು ಬಳಿಯಲ್ಲಿ ತಿಗುಳರು, ಒಂದು ಪಕ್ಕದಲ್ಲಿ ಕೊಡಗರು, ಒಂದು ಕೆಲದಲ್ಲಿ ಮಲೆವರು ಎಲ್ಲರೂ ಒಂದಾಗಿ ಬೆರೆತು, ಸಂದಣಿಸಿ ಕಾಳೆಗಕ್ಕೆ ಮುಂದುವರಿಯುವುದರೊಳಗಾಗಿ ಅದಟಿನಿಂದ ಅವರ ತಟ್ಟುಗಳ ಪಂದಲೆಗಳನ್ನು ದಿಗ್ವೃಂದಕ್ಕೆ ಬಲಿಕೊಟ್ಟು ನಲವಿಂದ ಚಿಕದೇವನೃಪನು ಅಂದ ಬಿಗುವಂತೆ ಹಿರಿಯ ಯಶಸ್ಸನ್ನು ಹೊಂದಿ ಸುಖದಿಂದ ಬಾಳುವನು.

ಶ್ರೀಪತಿಯ ಸೇವೆಯಿಂದೇ ಈ ರೀತಿಯಲ್ಲಿ ಕ್ಷಾತ್ರಧರ್ಮವನ್ನು ನಡಸುತ್ತಾ ಶಾಸ್ತ್ರಾಲಾಪಗಳ ತತ್ತ್ವನಿರೂಪಣೆಯಲ್ಲಿ ಅಪ್ರತಿಮಾಂಕನು ಪೊತ್ತು ಕಳೆಯುವನು.

ಒಳ್ಪಿನಿಂದ ಓದಿ ತಿಳಿದು, ವೇದಾಂತದ ತತ್ತ್ವಗತಿಯನ್ನು ಎಲ್ಲರೂ ಅರಿವಂತೆ ಆದರದಿಂದ ಅಪ್ರತಿಮನು ಯಾದವಗಿರಿಯೊಡೆಯನ ಅಡಿಗೆ ಬಿನ್ನಹ ಮಾಡಿದನು.

ಮೂವತ್ತು ಬಿನ್ನಹದಿಂದ, ಆ ವೇದಾಂತಾರ್ಥತತ್ತ್ವವಷ್ಟೂ ಸುಖದಿಂದ ಭಾವನೆಗೆ ಬರುವಂತೆ ಚಿಕದೇವನು ಯದುಶೈಲನಾಥನ ಅಡಿಗೆ ಇದನ್ನು ಉಸಿರಿದನು.

ಕ್ಷಿಪ್ರದಲ್ಲಿ ಎಲ್ಲರೂ ಅರಿಯುವಂತೆ ಅಪ್ರತಿಪತ್ತಿ ಮೊದಲಾದ ದೋಷವನ್ನು ಕಳೆದು, ಒಳ್ಪಿನಿಂದ, ಅಪ್ರತಿಮವೀರ ನರಪತಿಯು ಅಪ್ರಾಕೃತನ ಅಡಿಗೆ ಮಣಿದು ಬಿನ್ನಹ ಮಾಡಿದನು.

ಅದು ಹೇಗೆಂದರೆ—

ಸ್ವಸ್ತಿ ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಪ್ರೌಢ ಪ್ರತಾಪ ಅಪ್ರತಿಮವೀರನರಪತಿ ಶ್ರೀ ಚಿಕದೇವರಾಯಮಹಾರಾಯನು ಶ್ರೀರಂಗಪಟ್ಟಣದಲ್ಲಿ ಸಿಂಹಾಸನಾರೂಢನಾಗಿ ಸಾಮ್ರಾಜ್ಯದೀಕ್ಷೆಯನ್ನು ತಳೆದು ದೇವಬ್ರಾಹ್ಮಣ ಪರಿಪಾಲನವನ್ನು ಪ್ರಧಾನವಾಗಿ ಮಾಡಿ ಸಕಲ ಪ್ರಜೆಗಳನ್ನು ಪಾಲಿಸುತ್ತಿರಲಾಗಿ; ಉತ್ತರ ದೇಶದಲ್ಲಿ ಉದ್ವೃತ್ತ ಚರಿತ್ರನೆನ್ನಿಸಿ ಅರುವತ್ತು ಸಾವಿರ ಕುದುರೆಗಳೂ ಲಕ್ಷದ ಎಣಿಕೆಯ ಉಕ್ಕಾಳುಗಳೂ ಕೂಡಿ ನಡೆದು ಢಿಳ್ಳಿಯ ನಾಡಪ್ಪನ್ನೂ ಕೊಳ್ಳಿಯಲ್ಲೂ ಕಳ್ಳಗಾಳೆಗದಲ್ಲೂ ಜಳ್ಳುಮಾಡಿ, ವಿಜಯಾಪುರದರಸನನ್ನು ಜಯಿಸಿ, ಅವರ ನಾಡುಬೀಡುಗಳನ್ನು ಕೊಂಡು, ಗೋಲಕೊಂಡೆಯವನನ್ನು ಬಂಡುಗೈದು, ಅವನು ಕೊಟ್ಟ ಕಪ್ಪವನ್ನು ಒಪ್ಪಿಕೊಂಡು, ಆ ಸೊಕ್ಕಿನಿಂದ ಗಳಕ್ಕನೆ ಕನ್ನಡನಾಡನ್ನು ಹೊಕ್ಕ ಶಿವಾಜಿಯನ್ನು ಆಜಿರಂಗದಲ್ಲಿ ಓಡೆಗೆಡಿಸಿ, ಅವನ ಸೇನಾನಿಗಳಲ್ಲಿ ಜೈತಜಿಕಾಟಕರನನ್ನು ಘೋಟಕಗಳ ಖುರಪುಟಗಳಿಂದ ತೊತ್ತಳತುಳಿಸಿ, ಮೂಗು ಕಿವಿ ಕೊರಳು ಕೈಕಾಲುಗಳನ್ನು ಖಂಡಿಸಿ, ತುಂಡುಗಳಿಂದ ಪ್ರೇತಗಳ ಹಿಂಡುಗಳನ್ನು ತಣಿಯಿಸಿ, ಮತ್ತೆ ಆ ದಾದಜಿ ಕಾಕಡೆ ಎನ್ನಿಸುವವನ ಅಣಲನ್ನು ಕೊಯಿದು, ಆ ಪಂದಲೆಯನ್ನು ಮಂದಿಯಲ್ಲಿ ಮೆರೆಯಿಸಿ, ಆ ರಭಸದಿಂದ ಶಂಭೋಜಿಯನ್ನು ಭಯಾರ್ಣವದಲ್ಲಿ ಮುಳುಗಿಸಿ, ಅವನಿಗೆ ನೆರವಾಗಿ ಬಂದ ಎಕ್ಕೋಜಿಯ ಜನ್ಮವನ್ನು ಸಾಕುಮಾಡಿ, ಅವನ ಮಹಾಪ್ರಧಾನ ಎನ್ನಿಸುವ ಯಶವಂತರಾವುವಿನ ನಾಸಾಚ್ಛೇದನ ಮಾಡಿ, ಮತ್ತೆ ಆ ಶಂಭೋಜಿಗೆ ಕಪ್ಪವನ್ನು ಕೊಟ್ಟು ಕೂಟವನ್ನು ಕಳಿಸಿ ಪೆಂಪುಮಾಡಿದ ಗೋಲಕೊಂಡೆ ವಿಜಯಾಪುರದವರನ್ನು ಕೇಣಗೊಂಡು, ಅವರನ್ನು ಅಂಡಲೆಯುವುದಕ್ಕೆ ಢಿಳ್ಳಿಯಾಳುವ ಮಹಾಪಾದುಶಾಹನೆನ್ನಿಸುವ ಅವರಂಗಶಾಹನನ್ನು ಬರಿಸಿ, ಅವನಿಂದ ಅವರಿಬ್ಬರ ದೇಶಕೋಶಗಳನ್ನು ಕವರಿ ಕೈಸೆರೆಗೊಂಡು, ಮತ್ತೆ ಆ ಮರಾಟರ ಆಟೋಪವನ್ನು ನಂಬಿ ಮುಂದೆ ಹರಿದು ಎಡಬಲದಲ್ಲಿ ಇಪ್ಪ ಪೊಣರಿದ ಮೊರಸ ತಿಗಳ ಕೊಡಗ ಮಲೆಯಾಳ ನಾಡಿನ ಮನ್ನೆಯರನ್ನು ಭಂಗಬಡಿಸಿ, ಈ ತೆರದಲ್ಲಿ ಎಂಟು ದಿಕ್ಕನ್ನು

ಗೆದ್ದು, ಸುಖಸಂಕಥಾವಿನೋದದಿಂದ ಇರುತ್ತ; ಚಿತ್ತದಲ್ಲಿ ದಯಾರಸ ಉಂಟಾಗಲು ಹೀಗೆಂದು ಆಲೋಚಿಸಿದನು:—

ಎಂಟು ದಿಕ್ಕಿನ ಹಗೆಗಳು ಅಡಗಿದುದರಿಂದ ಪ್ರಜೆಗಳಿಗೆ ರಾಜಕ ಭಯವಿಲ್ಲದೆಯೂ, ದೇವತಾಪ್ರಸಾದದಿಂದ ಮಳೆಬೆಳೆಗಳು ಉಂಟಾದುದರಿಂದ ದೈವಿಕಭಯವಿಲ್ಲದೆಯೂ ಇರುವುದರಿಂದ ಪ್ರಜೆಗಳು ಅಷ್ಟರೂ ಇಹದಲ್ಲಿ ಸುಖವಾಳುವರು. ಇವರಿಗೆ ಪರಗತಿಯನ್ನೂ ಸಂಪಾದಿಸಬೇಕು ಎಂದು ಆರಯ್ದು—

ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ
ಯೇಽಪಿ ಸ್ಯುಃ ಪಾಪಯೋನಯಃ
ಸ್ತ್ರಿಯೋ ವೈಶ್ಯಾಃ ತಥಾ ಶೂದ್ರಾಃ
ತೇಽಪಿ ಯಾಂತಿ ಪರಾಂ ಗತಿಮ್

ಎಂದು ಗೀತೆಯಲ್ಲಿ ಶ್ರೀ ಕೃಷ್ಣನು ತಾನೇ ನಿರೂಪಿಸಿದ ತೆರದಲ್ಲಿ ಹಿಂದಕ್ಕೆ ಎಷ್ಟಾದರೂ ಪಾಪಿಗಳಾದರೂ ಯಾವ ಜಾತಿಯಲ್ಲಿ ಹುಟ್ಟಿದ್ದರೂ ಈಗಲೂ ತತ್ತ್ವಜ್ಞಾನದಿಂದ ತನ್ನಲ್ಲಿ ಭಕ್ತಿಗೈದು ನಂಬಿದವರಿಗೆ ಮುಕ್ತಿ ತಪ್ಪದು ಎಂದು ಎಣಿಸಿ, ಅಕ್ಷರವನ್ನು ಅರಿಯದ ಒಕ್ಕಲಿಗರಿಗೂ ಹೆಣ್ಣುಗಳಿಗೂ ಸಂಸ್ಕೃತದಿಂದ ತತ್ತ್ವಜ್ಞಾನವಾಗುವುದು ಅಸಾಧ್ಯ ಎಂದು— ಎಲ್ಲರೂ ತಿಳಿಯುವ ಹಾಗೆ ಕನ್ನಡ ಮಾತಿನಲ್ಲಿ ಮೆಲ್ನುಡಿಗಳಿಂದ ಅಖಿಲತತ್ತ್ವಾರ್ಥಗಳನ್ನು ಸಂಗತಿಗೊಳಿಸಿ, ತಾನು ತನ್ನ ಕುಲದೇವತೆಯಾದ ಯಾದವಗಿರಿ ನಾರಾಯಣನ ಅಡಿದಾವರೆಗಳಿಗೆ ಬಿನ್ನಹ ಮಾಡುವ ನೆಪದಲ್ಲಿ ಮೂವತ್ತು ಬಿನ್ನಹಗಳನ್ನು ಪೋಣಿಸಿದನು.

ಅವರಲ್ಲಿ—

ಒಂದನೆಯ ಬಿನ್ನಹದಲ್ಲಿ—ಅವಾಪ್ತಸಮಸ್ತಕಾಮನಾದ ಶ್ರೀಮನ್ನಾರಾಯಣನು ಪರವ್ಯೂಹವಿಭವಾನ್ತರ್ಯಾಮ್ಯರ್ಚಾವತಾರಗಳನ್ನು ಅಂಗೀಕರಿಸಿರುವುದು ಭಕ್ತಾನುಗ್ರಹಾರ್ಥವಾಗಿ ಎಂದು ಅವನ ದಯೆಯ ಅತಿಶಯವನ್ನು ಪ್ರಕಟಿಸಿದನು.

ಎರಡನೆಯ ಬಿನ್ನಹದಲ್ಲಿ—ಶ್ರೀಮನ್ನಾರಾಯಣನೇ ಜಗತ್ ಕಾರಣನು ಎಂದು ನಿರೂಪಿಸಿದನು.

ಮೂರನೆಯ ಬಿನ್ನಹದಲ್ಲಿ—ಆ ಜಗತ್ಕಾರಣವಸ್ತುವನ್ನು ತಿಳಿಯು ಕೂಡದು ಎಂಬ ಆಕ್ಷೇಪವನ್ನು ಪರಿಹರಿಸಿದನು.

ನಾಲ್ಕನೆಯ ಬಿನ್ನಹದಲ್ಲಿ—ಆ ಜಗತ್ಕಾರಣ ವಸ್ತುವನ್ನು ತಿಳಿಯು ವುದು ಕೂಡ ವೇದಶಾಸ್ತ್ರಗಳಿಂದಲೇ ಎಂದು ವರ್ಣಿಸಿದನು.

ಐದನೆಯ ಬಿನ್ನಹದಲ್ಲಿ—ಆ ವೇದಶಾಸ್ತ್ರಗಳು ಅಷ್ಟೂ ಶ್ರೀಮನ್ನಾ ರಾಯಣನನ್ನೇ ಪ್ರತಿಪಾದಿಸುವ ರೀತಿಯನ್ನು ತಿಳಿಸಿದನು.

ಆರನೆಯ ಬಿನ್ನಹದಲ್ಲಿ—ಆ ವೇದಶಾಸ್ತ್ರಗಳಲ್ಲಿ ತೋರುವ ವಿರೋಧಗಳನ್ನು ನೀಗಿದನು.

ಏಳನೆಯ ಬಿನ್ನಹದಲ್ಲಿ—ಆ ವೇದಶಾಸ್ತ್ರಸಿದ್ಧವಾಗಿ ನಾರಾಯಣನಿಗೆ ಶರೀರವಾದ ಜಗತ್ತು ಮಿಥ್ಯೆಯಲ್ಲ, ಸತ್ಯವಾಗಿರುವುದು, ಎಂಬುದನ್ನು ಪ್ರತಿಪಾದಿಸಿದನು.

ಎಂಟನೆಯ ಬಿನ್ನಹದಲ್ಲಿ—ಸ್ವಾಪ್ನದೃಷ್ಟಾಂತದಿಂದ ಪ್ರಪಂಚವು ಮಿಥ್ಯೆಯೆಂದು ಭ್ರಮಿಸದಂತೆ ಕನಸಿನಲ್ಲಿ ಕಾಣುವ ವಸ್ತುಗಳನ್ನು ತತ್ಕಾಲದಲ್ಲಿ ಜಗದೀಶ್ವರನು ಉಂಟುಮಾಡುವುದರಿಂದ ಸತ್ಯ—ಎಂದು ಉಪಪಾದಿಸಿದನು.

ಒಂಬತ್ತನೆಯ ಬಿನ್ನಹದಲ್ಲಿ—ಜಗತ್ತನ್ನು ವಿಷಮವಾಗಿ ಸೃಷ್ಟಿಸುವುದರಿಂದ ಜಗದೀಶ್ವರನು ವಿಷಮನೂ ನಿರ್ದಯನೂ ಆಗುವನು ಎಂಬ ಆಕ್ಷೇಪವನ್ನು ತೀರಿಸಿದನು.

ಹತ್ತನೆಯ ಬಿನ್ನಹದಲ್ಲಿ—ಘಟಪಟಾದಿ ದೃಷ್ಟಾಂತದಿಂದ ಜಗಕ್ಕೆ ಮೂರು ರೀತಿಯ ಕಾರಣಗಳು ಬೇರೆ ಬೇರೆ ಉಂಟು ಎಂಬ ಆಕ್ಷೇಪವನ್ನು, ಚಿತ್ ಅಚಿತ್ ವಸ್ತುಶರೀರಕನಾದ ಜಗದೀಶ್ವರನೊಬ್ಬನೇ ಮೂರೂ ತೆರದ ಕಾರಣವಾಗಿರುವನು ಎಂದು, ಸಮಾಧಾನ ಮಾಡಿದನು.

ಹೀಗೆ ಹತ್ತು ಬಿನ್ನಹಗಳಲ್ಲಿ ಶ್ರೀಮನ್ನಾರಾಯಣನೇ ಪರಮದಯಾಳುವೂ ಜಗತ್ಕಾರಣನೂ ಅಪರಿಚ್ಛೇದ್ಯಮಹಿಮನೂ ಸಕಲವೇದವೇದ್ಯನೂ ಆಶ್ಚರ್ಯಚರಿತ್ರನೂ ಚೇತನಾಚೇತನಶರೀರಕನೂ ಅಘಟಿತಾರ್ಥಘಟಕನೂ ಸರ್ವಸಮನೂ ತ್ರಿವಿಧಕಾರಣನೂ ಎಂದು ತಿಳಿಸಿದುದರಿಂದ ಈಶ್ವರತತ್ತ್ವವನ್ನು ನಿರೂಪಣ ಮಾಡಿದನು.

ಹನ್ನೊಂದನೆಯ ಬಿನ್ನಹದಲ್ಲಿ—ಜೀವತತ್ತ್ವಸ್ವರೂಪವನ್ನು ವಿವರಿಸಿದನು.

ಹನ್ನೆರಡನೆಯ ಬಿನ್ನಹದಲ್ಲಿ—ತತ್ತ್ವಸೃಷ್ಟಿಕ್ರಮವನ್ನು ತೋರಿಸಿದನು.

ಹದಿಮೂರನೆಯ ಬಿನ್ನಹದಲ್ಲಿ—ಬ್ರಹ್ಮಾಂಡಸೃಷ್ಟಿಪ್ರಕಾರವನ್ನು ಬಗೆಗೊಳಿಸಿದನು.

ಹದಿನಾಲ್ಕನೆಯ ಬಿನ್ನಹದಲ್ಲಿ—ಆ ಬ್ರಹ್ಮಾಂಡದಲ್ಲಿರುವ ಹದಿನಾಲ್ಕು ಲೋಕಗಳ ನೆಲೆಯನ್ನು ನಿರ್ಣಯಿಸಿದನು.

ಹದಿನೈದನೆಯ ಬಿನ್ನಹದಲ್ಲಿ—ಭೂಮಿಮಂಡಲಪರಿಮಾಣವನ್ನು ಗಣನೆಮಾಡಿದನು.

ಹದಿನಾರನೆಯ ಬಿನ್ನಹದಲ್ಲಿ—ಸುಖಾನುಭವಸ್ಥಾನವಾದ ಭೂಸ್ವರ್ಗಗಳ ರೀತಿಯನ್ನು ಅರಿವುಗೊಳಿಸಿದನು.

ಹದಿನೇಳನೆಯ ಬಿನ್ನಹದಲ್ಲಿ — ದುಃಖಾನುಭವಸ್ಥಾನಗಳಾದ ನರಕಗಳ ಸ್ಥಿತಿಯನ್ನು ವಿಸ್ತರಿಸಿದನು.

ಹದಿನೆಂಟನೆಯ ಬಿನ್ನಹದಲ್ಲಿ—ಪಾಪಫಲಗಳು ಕ್ರೂರವಾಗಿರುವುದೆಂದು ತೋರಿ, ಆ ಪಾಪಗಳಷ್ಟೂ ಶ್ರೀಮನ್ನಾರಾಯಣನ ಚರಣಾರವಿಂದದ ಭಕ್ತಿಯುಳ್ಳೇ ಪರಿಹಾರವಾಗುವುದು ಎಂಬುದನ್ನು ಎದೆಗೊಳಿಸಿದನು.

ಹೀಗೆ ಪರತತ್ತ್ವಸ್ವರೂಪವೆಂಬುದು ಆದಿಯಾಗಿ ಈವರೆಗೂ ಏಳು ಬಿನ್ನಹದಲ್ಲಿ ಪ್ರಾಕೃತಸೃಷ್ಟಿಕ್ರಮವನ್ನೂ ಆ ತತ್ತ್ವಗಳಿಂದ ಹುಟ್ಟಿದ ಬ್ರಹ್ಮಾಂಡವಿಸ್ತಾರವನ್ನೂ ಆ ಬ್ರಹ್ಮಾಂಡದಲ್ಲಿರುವ ಹದಿನಾಲ್ಕು ಲೋಕಗಳ ನೆಲೆಯನ್ನೂ ಅವುಗಳಲ್ಲಿ ಭೂಮಂಡಲದ ಪರಿಮಾಣವನ್ನೂ ಭೂಸ್ವರ್ಗಗಳ ನರಕಯಾತನೆಗಳನ್ನೂ ಆ ಯಾತನಾ ಪರಿಹಾರೋಪಾಯವನ್ನೂ ಹೇಳಿದುದರಿಂದ ಅಚಿತ್ ತತ್ತ್ವಸ್ವರೂಪವನ್ನು ನಿರೂಪಣ ಮಾಡಿದನು.

ಹೀಗೆ ಹದಿನೆಂಟು ಬಿನ್ನಹಗಳಿಂದ ಈಶ್ವರ ಚೇತನಾ ಅಚೇತನಗಳೆಂಬ ತತ್ತ್ವತ್ರಯವನ್ನು ನಿರೂಪಿಸಿದನು. ಈ ಮೂರೂ ತತ್ತ್ವಗಳ

ನೆಲೆಯನ್ನು ವಿಚಾರಿಸಿದರೆ, ಚಿತ್ ಅಚಿತ್ ತತ್ತ್ವಗಳು ಎರಡೂ ಅಲ್ಪ ಸುಖಗಳೂ ಅನಿತ್ಯವೂ ಎಂದು ಅವುಗಳಲ್ಲಿ ವೈರಾಗ್ಯವೂ ಈಶ್ವರತತ್ತ್ವ ಒಂದೇ ನಿರವಧಿಕಆನಂದವೆಂದು ಅದರಲ್ಲಿ ಅನುರಕ್ತಿಯೂ ಹುಟ್ಟು ವುದು. ಹೀಗೆ ವಿಷಯವಿರಕ್ತಿಯೂ ಪರಮಾತ್ಮಭಕ್ತಿಯೂ ಹುಟ್ಟಿದವರಿಗೆ ಮೋಕ್ಷೋಪಾಯವು ಅಪೇಕ್ಷಿತವು ಎಂದು ಇನ್ನು ಹನ್ನೆರಡು ಬಿನ್ನಹ ಗಳಿಂದ ವಿಸ್ತರಿಸಿದನು. ಅದು ಹೇಗೆಂದರೆ—

ಹತ್ತೊಂಬತ್ತನೆಯ ಬಿನ್ನಹದಲ್ಲಿ—ನಾಲ್ಕು ಪುರುಷಾರ್ಥಗಳಲ್ಲಿ ಮೋಕ್ಷವೇ ಹಿರಿದು ಎಂದು ಪ್ರತಿಕಟ್ಟಿದನು.

ಇಪ್ಪತ್ತನೆಯ ಬಿನ್ನಹದಲ್ಲಿ — ಸಾತ್ತ್ವಿಕಶಾಸ್ತ್ರಗಳಿಂದಲೇ ಮೋಕ್ಷೋಪಾಯವನ್ನು ತಿಳಿಯಬೇಕು ಎಂದು ಹೇಳಿದನು.

ಇಪ್ಪತ್ತೊಂದನೆಯ ಬಿನ್ನಹದಲ್ಲಿ — ಎಲ್ಲಾ ತಂತ್ರಗಳಲ್ಲೂ ಶ್ರೀ ಪಾಂಚರಾತ್ರವೇ ಪ್ರಬಲಪ್ರಮಾಣವೆಂಬುದನ್ನು ನಿರಿಗೆಗೊಳಿ ಸಿದನು.

ಇಪ್ಪತ್ತೆರಡನೆಯ ಬಿನ್ನಹದಲ್ಲಿ -- ಮೋಕ್ಷೋಪಯೋಗಿಯಾದ ವಿಷಯವೈರಾಗ್ಯವು ದುರ್ಘಟ ಎಂಬ ಆಕ್ಷೇಪವನ್ನು ನಿವಾರಿಸಿದನು.

ಇಪ್ಪತ್ತಮೂರನೆಯ ಬಿನ್ನಹದಲ್ಲಿ —ಕೇವಲ ಕರ್ಮದಿಂದ ಮುಕ್ತಿ ಯಿಲ್ಲ ಎಂಬುದನ್ನು ದೃಢೀಕರಿಸಿದನು.

ಇಪ್ಪತ್ತನಾಲ್ಕನೆಯ ಬಿನ್ನಹದಲ್ಲಿ — ಕಾಲಕರ್ಮಸ್ವಭಾವಾದಿ ಗಳಿಂದಲೇ ಅಪೇಕ್ಷಿತಫಲವಾಗುವುದು ಎಂಬ ಭ್ರಮೆಯನ್ನು ತೊಲ ಗಿಸಿದನು.

ಇಪ್ಪತ್ತೈದನೆಯ ಬಿನ್ನಹದಲ್ಲಿ—ಬಯಸಿದಷ್ಟನ್ನೂ ಕೊಡುವ ಸರ್ವೇಶ್ವರನು ಮಿಕ್ಕ ಪುರುಷಾರ್ಥವನ್ನು ಬಯಸಿದವರಿಗೆ ಅವರು ಬಯಸುವ ನಿರ್ಬಂಧದಿಂದ ಆಯಾ ಪುರುಷಾರ್ಥವನ್ನು ಕೊಡುವನು, ಮೋಕ್ಷವನ್ನು ಬಯಸುವವರಿಗೆ ಮನವೊಲಿದು ಮೋಕ್ಷವನ್ನೇ ಸಂತೋಷ ದಿಂದ ಕೊಡುವನು, ಎಂಬುದನ್ನು ಕಾಣಿಸಿದನು.

ಇಪ್ಪತ್ತಾರನೆಯ ಬಿನ್ನಹದಲ್ಲಿ — ಶ್ರೀಮನ್ನಾರಾಯಣನಿಗಲ್ಲದೆ ಮಿಕ್ಕವರಿಗೆ ರಕ್ಷಣಸಾಮರ್ಥ್ಯವಿಲ್ಲ ಎಂಬುದನ್ನು ಸೊಲ್ಲಿಸಿದನು.

ಇಪ್ಪತ್ತೇಳನೆಯ ಬಿನ್ನಹದಲ್ಲಿ—ಮೋಕ್ಷವನ್ನು ಬಯಸುವವನು ತನ್ನ ದೋಷಗಳನ್ನು ಎಣಿಸಿ ಅಳುಕುವುದು ಬೇಡ, ಭಗವದ್ಗುಣಗಳನ್ನೇ ಎಣಿಸಿ ಧೈರ್ಯವಾಗಿರುವುದು ಎಂದು ಏರ್ಪಡಿಸಿದನು.

ಇಪ್ಪತ್ತೆಂಟನೆಯ ಬಿನ್ನಹದಲ್ಲಿ—ಸಂಸಾರದ ಬೇರು ಎನ್ನಿಸಿದ ಅವಿದ್ಯಾ ಕರ್ಮ ವಾಸನಾ ರುಚಿ ಪ್ರಕೃತಿಸಂಬಂಧಗಳನ್ನು ಜಗದೀಶ್ವರನು ತಾನೇ ಬಿಡಿಸುವನು ಎಂಬುದನ್ನು ಪ್ರಕಾಶಮಾಡಿದನು.

ಇಪ್ಪತ್ತೊಂಬತ್ತನೆಯ ಬಿನ್ನಹದಲ್ಲಿ — ಶ್ರೀಮನ್ನಾರಾಯಣನ ದಿವ್ಯರೂಪವು ಅಪ್ರಾಕೃತವಾಗಿ ಮುಕ್ತಭೋಗ್ಯವಾಗಿ ಇರುವುದು ಎಂಬುದನ್ನು ಅನುವದಿಸಿದನು.

ಮೂವತ್ತನೆಯ ಬಿನ್ನಹದಲ್ಲಿ—ಪರವಾಸುದೇವನ ಊಳಿಗವು ಮುಕ್ತರಿಗೆ ಪರಮಭೋಗ್ಯವಾಗಿರುವುದು ಎಂಬುದನ್ನು ಹೇಳಿ, ಕೃತಿಯನ್ನು ನೆರವೇರಿಸಿದನು.

ಅದು ಹೇಗೆಂದರೆ—

# ಮೊದಲನೆಯ ಹತ್ತು ಬಿನ್ನಹ

## ಒಂದನೆಯ ಬಿನ್ನಹ

ಪರವಾಸುದೇವಾ! ಭಕ್ತರನ್ನು ಪೊರೆಯುವುದಕ್ಕಾಗಿ ನೀನು ವ್ಯೂಹಾದಿಭಾವವನ್ನು ತಾಳಿದೆ—ಎಂದು ಹೇಳಿ, ಯದುಶೈಲನಾಥನ ಚರಣಾಬ್ಜಕ್ಕೆ ಅಪ್ರತಿಮಾಂಕನು ಬಿನ್ನವಿಸಿದನು.

ಶ್ರೀಮನ್ನಾರಾಯಣಾ! ನೀನು ಶ್ರಿಯಃಪತಿಯೂ ಅಖಿಲದೋಷಪ್ರತ್ಯನೀಕನೂ ಸಕಲಕಲ್ಯಾಣಗುಣಾಕಾರನೂ ಅವಾಪ್ತಸಮಸ್ತಕಾಮನೂ ಎನ್ನಿಸಿ ವೈಕುಂಠದಲ್ಲಿ ದಿವ್ಯಮಹಿಷೀವರ್ಗಸಮೇತನಾಗಿ ಅನಂತ ಗರುಡ ವಿಷ್ವಕ್ಸೇನಾದಿ ನಿತ್ಯರಿಗೂ ಮುಕ್ತರಿಗೂ ನಿನ್ನ ಸೇವಾಸಾಮ್ರಾಜ್ಯದಲ್ಲಿ ನಿರವಧಿಕಾನಂದವನ್ನು ಉಂಟುಮಾಡುತ್ತ, ಚಿತ್ತದಲ್ಲಿ ಹೊಮ್ಮಿದ ಆಕಸ್ಮಿಕ ದಯೆಯಿಂದ ಪ್ರಳಯಕಾಲದಲ್ಲಿ ಅವ್ಯಕ್ತಸೂಕ್ಷ್ಮಪ್ರಕೃತಿಯಲ್ಲಿ ಅಡಗಿ—ಮೇಣದಲ್ಲಿ ಹುದುಗಿದ ಚಿನ್ನದ ಒರೆಯ ಪುಡಿಯಂತೆ—ರೂಪು ಅಳಿದಿದ್ದ ಬದ್ಧಾತ್ಮವರ್ಗವನ್ನು ನಿತ್ಯಮುಕ್ತರಂತೆ ಮೋಕ್ಷಾನಂದದಲ್ಲಿ ಇರಿಸಬೇಕು ಎಂದು ನಿನ್ನ ಸತ್ಯಸಂಕಲ್ಪದಿಂದ ಪ್ರಕೃತಿಯಲ್ಲಿ ಹೊಕ್ಕು ಮಹದಹಂಕಾರಗಳನ್ನು ಪಂಚತನ್ಮಾತ್ರೆಗಳನ್ನು ಪಂಚಮಹಾಭೂತಗಳನ್ನು ಉಂಟುಮಾಡಿ ಅವುಗಳಿಂದ ಬ್ರಹ್ಮಾಂಡಗಳನ್ನು ಒಡರಿಸಿ; ಅದರಲ್ಲಿ ಬ್ರಹ್ಮಾದಿಸುರರು ನರರು ತಿರ್ಯಕ್ಕುಗಳು ಸ್ಥಾವರಗಳು ಎಂದು ನಾಲ್ಕು ತೆರದಲ್ಲಿ ಅವರವರ ಪೂರ್ವ ಕರ್ಮಾನುಗುಣವಾದ ದೇಹಗಳನ್ನು ಆಯಾ ದೇಹಕ್ಕೆ ಉಚಿತವಾದ ಜ್ಞಾನಶಕ್ತ್ಯಾದಿಗಳನ್ನು ಕೊಟ್ಟು, ನೀನು ಕೊಟ್ಟ ಕಳೇಬರಾದಿಗಳಿಂದ ಅವರು ಏನಾದರೂ ಕೆಟ್ಟದ್ದನ್ನು ಮಾಡಿ ಪುರುಳು ನಾಶವಾಗದ ಹಾಗೆ ತಕ್ಕದ್ದು ಇದು ಮಿಕ್ಕದ್ದು ಇದು ಎಂದು ತಿಳಿಹಿಸುವ ಆ ವೇದಶಾಸ್ತ್ರಗಳನ್ನು ಕೊಟ್ಟು ಕರುಣಿಸಿದೆ. ಹಾಗಾದರೂ ಒಡೆಯನ ಆಜ್ಞೆಯನ್ನು ಹಿಡಿದು ನಡೆಯಲಾರದ ಜಡರ ಎಡರನ್ನು ಬಿಡಿಸಿ ಕಾಪಿಡಲು ಅವರೊಡನೆ ಇರುವೆನೆಂದು ಮೂರ್ತಿತ್ರಯಮಧ್ಯದಲ್ಲಿಯೂ ಕ್ಷೀರಾಬ್ಧಿದಲ್ಲಿಯೂ ಸ್ವರ್ಗಮೊದಲಾದ ಬಿಡುಗಣ್ಣರ ಬೀಡುಗಳಲ್ಲಿಯೂ ನಿಂತೆ. ಹಾಗಾದರೂ ದೇವರಿಗೂ ಮುನಿಗಳಿಗೂ ಯೋಗಿಗಳಿಗೂ ಅಲ್ಲದೆ ಮಿಕ್ಕ ಮನುಜಾದಿಗಳಿಗೆ

ಹತ್ತಿರ ಬರುವುದಕ್ಕೂ ಸಲ್ಲದುದರಿಂದ ಮನುಜರಲ್ಲಿ ಆಬಾಲಗೋಪಾಲಕರಿಗೂ ಕರು ತುರು ಕರಡಿ ಮುಸು ಕೋಡಗ ಮೊದಲಾದ ತಿರ್ಯಕ್ ಜಾತಿಗಳಿಗೂ ಸೇರಿ ಬದುಕುವಂತೆ ರಾಮಕೃಷ್ಣಾದಿ ಅವತಾರಗಳನ್ನು ತಳೆದೆ. ಹಾಗಾದರೂ ಆಯಾ ದೇಶದಲ್ಲೂ ಆಯಾ ಕಾಲದಲ್ಲೂ ಇರುವವರಿಗಲ್ಲದೆ ಉಳಿದವರಿಗೆ ಉಪಕಾರವಲ್ಲ ಎಂಬುದರಿಂದ ಸರ್ವದೇಶ ಸರ್ವಕಾಲ ಸರ್ವಾವಸ್ಥೆಯಲ್ಲಿ ಇರುವ ಸರ್ವಚೇತನಾಚೇತನವರ್ಗದಲ್ಲಿ ವ್ಯಾಪಿಸಿದ್ದು ಮನೋವಾಕ್ಕಾಯಗಳನ್ನು ಪ್ರೇರಿಸುತ್ತ ಅಂತರ್ಯಾಮಿ ಎನ್ನಿಸಿದೆ. ಹಾಗಾದರೂ ಎಲ್ಲಿಯಾದರೂ ಒಬ್ಬನಿಗೆ ಅನೇಕ ಜನ್ಮಸಾಧ್ಯ ಯೋಗಧ್ಯಾನವಿಷಯನು ಎಂಬುದಲ್ಲದೆ ಮಿಕ್ಕವರಿಗೆಲ್ಲಾ ಒಡನೆ ಇದ್ದೂ ಇಲ್ಲದಂತೆ ಆದುದರಿಂದ ಸಕಲಜನವೂ ಚರ್ಮಚಕ್ಷುಸ್ಸಿಂದಲೇ ಸಾಕ್ಷಾತ್ಕರಿಸಿ ತಂತಮ್ಮ ಮನಸ್ಸು ಬಯಸಿದ ಸೇವೆಗಳನ್ನು ಮಾಡಿ ಕೃತಾರ್ಥರಾಗುವಂತೆ ಸರ್ವಸುಲಭವೆನ್ನಿಸಿದ ಅರ್ಚಾವತಾರವನ್ನು ಎಸಗಿ ಕೆಲವು ಕಾಲ ಸತ್ಯಲೋಕದಲ್ಲಿ ಬ್ರಹ್ಮನಿಂದ ಪೂಜೆಗೊಂಡು ಬಳಿಕ ಸನತ್ಕುಮಾರನಿಗೆ ಒಲಿದು ಆತನೊಡನೆ ಉತ್ತರ ಬದರಿಕಾಶ್ರಮಕ್ಕೆ ಬಂದು ಅಲ್ಲಿ ಸಾಕ್ಷಾತ್ ಅಷ್ಟಾಕ್ಷರೋಪದೇಶ ದೇಶಿಕನೆನಿಸಿ ನಿನ್ನ ರೂಪಾಂತರವಾದ ನರಮುನಿಯಿಂದ ಅರ್ಚನವನ್ನು ಪಡೆದು ಮತ್ತೆ ಈ ಕರ್ಣಾಟಮಂಡಲ ಮಂಡನವೆನಿಸುವ ಯದುಶಿಖರಿಶಿಖರವನ್ನು ನೆಲಸುವ ಬೀಡಾಗಿ ಮಾಡಿಕೊಂಡು ನಿಂತು ಸಕಲಜನರಕ್ಷಣದೀಕ್ಷಿತ ಎನ್ನಿಸಿದೆ. ಹಾಗೆ ಸರ್ವಜನಸಾಧಾರಣವಲ್ಲದೆ ಈ ಯದುವಂಶದಲ್ಲಿ ಹುಟ್ಟಿದವರಿಗೆ ಕುಲದೇವತೆ ಎನಿಸಿ ದಯಾವಿಶೇಷದಿಂದ ಕಾಪಾಡುವವನಾದುದರಿಂದ ನನ್ನಲ್ಲಿಯೂ ಅಕಾರಣಕರುಣಾಬ್ಧಿಕಲ್ಲೋಲಗಳನ್ನು ಕವಿಸಿ, ಮನ್ನಿಸುವುದು, ಮನ್ನಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಎರಡನೆಯ ಬಿನ್ನಹ

ಸಿರಿಯುರಸಾ! ನೀನೇ ಜಗವನ್ನು ಪರಿವಿಡಿಯಿಂದ ಪಡೆದು, ಪೊರೆದು, ಹೊಟ್ಟೆಯಲ್ಲಿ ಕೊಳ್ಳುವೆ. ಆದುದರಿಂದ ನೀನೇ ಪರಬ್ರಹ್ಮನು, ಎಂದು ಈ ನರಪತಿ ಯದುಗೋತ್ರಪತಿಗೆ ಬಿನ್ನವಿಸಿಗೆಯ್ವನು.

ಪರಬ್ರಹ್ಮಸ್ವರೂಪಾ! ಈ ಜಗತ್ತು ಯಾವ ವಸ್ತುವಿನಿಂದ ಹುಟ್ಟು ವುದು, ಯಾವುದರಿಂದ ಬದುಕಿರುವುದು, ಯಾವುದರಲ್ಲಿ ಅಡಗುವುದು, ಆ ವಸ್ತುವೇ ಪರಬ್ರಹ್ಮವೆಂದು ಗುರುತುಮಾಡಿ, ಇಂತಹ ಜಗತ್ಕಾರಣ ವಸ್ತುವೂ ನೀನೇ ಎಂದು ವೇದಾಂತಗಳು ಹಲವು ತೆರದಲ್ಲಿ ಸಾಮಾನ್ಯ ವಿಶೇಷ ಶಬ್ದಗಳಿಂದ ನಿನ್ನನ್ನೇ ಹೊಗಳಿದುವು. ಹೀಗಿರುವ ನೀನು ಮಹ ದಾದಿ ತತ್ತ್ವಕ್ರಮದಿಂದ ಪಂಚಮಹಾಭೂತಗಳನ್ನು ಉಂಟುಮಾಡಿ ಅವುಗಳಿಂದ ಬ್ರಹ್ಮಾಂಡವನ್ನು ಸವೆದು ಅದರಲ್ಲಿ ಬ್ರಹ್ಮಾದಿದೇವತೆ ಗಳನ್ನು ಸೃಷ್ಟಿಸಿ ಅವರವರಿಗೆ ಒಂದೊಂದು ಅಧಿಕಾರವನ್ನು ಮಿತಿಮಾಡಿ ಕೆಲವರನ್ನು ಸೃಷ್ಟಿ ಸ್ಥಿತಿ ಸಂಹಾರಗಳಾದ ನಿನ್ನ ಊಳಿಗದಲ್ಲಿ ನಿಯಮಿ ಸಿದೆ. ಅವರೂ ಜಗತ್ತಿನಲ್ಲಿ ಏಕದೇಶವನ್ನು ನಿನ್ನ ಅನುಮತಿ ಹಿಡಿದು ಹುಟ್ಟಿಸುವುದೂ ಪೊರೆಯುವುದೂ ನಾಶಮಾಡುವುದೂ ಆಗಿರುವದರಿಂದ ಅವರನ್ನು ಕೊಂಡಾಡುವ ಎಡೆಯಲ್ಲಿ ನಾಲ್ಮೊಗನೇ ಜಗತ್ಕಾರಣವೆಂದೂ ರುದ್ರನೇ ಜಗತ್ಕಾರಣವೆಂದೂ ಕೊಂಡಾಡುವರು. ಈ ನೆಲೆಯನ್ನು ತಿಳಿಯದವರು ಭ್ರಮಿಸುವರು. ಒಬ್ಬನನ್ನು ಸ್ತುತಿಮಾಡುವ ಪ್ರಸ್ತಾಪ ವಿಲ್ಲದೆ ಜಗತ್ಸೃಷ್ಟಿಕ್ರಮವನ್ನು ಹೇಳುವಲ್ಲಿ ವಿಚಾರಿಸಿದರೆ, ಆದಿ ಯಲ್ಲಿ ನಾರಾಯಣನೊಬ್ಬನೇ ಉಳಿದಿದ್ದನೆಂದೂ ಅವನ ನಾಭೀಪದ್ಮ ದಲ್ಲಿ ಬ್ರಹ್ಮನು ಒಗೆದನೆಂದೂ ಅವನ ಹಣೆಯ ಬೆವರಿನಿಂದ ರುದ್ರನು ಹುಟ್ಟಿದನೆಂದೂ ಹೇಳಿದುದರಿಂದ ನೀನೇ ಜಗದಾದಿಕಾರಣವಾದ ಪರ ಬ್ರಹ್ಮವು ಎಂಬುದನ್ನು ಸಾತ್ತ್ವಿಕರಿಂದ ತಿಳಿದು ನನ್ನ ತಾಪತ್ರಯವನ್ನು ಕಳೆಯಲೆಂದು ನಿನ್ನ ಅಡಿಗಳ ನೆರಳನ್ನು ಸೇರಿದೆನು. ನನ್ನನ್ನು ತಂಪು ಗೊಳಿಸುವುದು, ತಂಪುಗೊಳಿಸುವುದು, ಅನನ್ಯಜನ ಸುಲಭ, ಶ್ರೀಯದು ಶೈಲವಲ್ಲಭಾ!

## ಮೂರನೆಯ ಬಿನ್ನಹ

ಅಗಣಿತವಾದ ಕಲ್ಯಾಣಗುಣಾದಿಗಳು ಹೀಗೆ ಎಂದು ಅಳತೆಮಾಡುವುದಕ್ಕೆ ಅಸಾಧ್ಯವಾದರೆ ತಾನೆ ಏನು! ನೀನು (ಭಕ್ತರ) ಮನಸ್ಸನ್ನು ಹೊಗುವೆ—ಎಂದು ಜಗದ ಅಣ್ಣನಿಗೆ ಅಣ್ಮೆನ ಅಣ್ಣನು ಎರಕದಿಂದ ಒರೆದನು.

ಅಪ್ರಮೇಯಾ! ಜಗತ್ತಿನಲ್ಲಿ ಪ್ರಮೇಯ ಎಂದರೆ—ತಿಳಿಯಲು ತಕ್ಕ ವಸ್ತು. ಆ ವಸ್ತುವನ್ನು ತಿಳಿಯುವ ಪ್ರಮಾಣಗಳು ಪ್ರತ್ಯಕ್ಷವೆಂದೂ ಅನುಮಾನವೆಂದೂ ಶಬ್ದವೆಂದೂ ಮೂರು ತೆರನಾಗಿರುವುದು. ಅವುಗಳಲ್ಲಿ ಪ್ರತ್ಯಕ್ಷವೆಂದರೆ—ಇಂದ್ರಿಯಾರ್ಥ ಸಂಬಂಧದಿಂದ ಹುಟ್ಟುವ ತಿಳಿವು. ಇದು ಆರು ತೆರನಾಗಿರುವುದು. ಅದು ಹೇಗೆಂದರೆ—ಕಣ್ ತೆರೆದು ಒಂದು ವಸ್ತುವನ್ನು ನೋಡಿದರೆ, ಈ ವಸ್ತು ಕರಿದು, ಇದು ಬಿಳಿದು ಎಂಬ ಇವು ಮೊದಲಾಗಿ ಹುಟ್ಟುವ ತಿಳಿವು ಚಾಕ್ಷುಷಪ್ರತ್ಯಕ್ಷ ಎನ್ನಿಸುತ್ತದೆ. ಕಿವಿಯಿಂದ ಆಲಿಸಿದರೆ, ಇದು ಈ ಬಗೆಯ ಧ್ವನಿ, ಇದು ಈ ಬಗೆಯ ನುಡಿ, ಇದು ಈ ಅಕ್ಷರ ಎಂದು ಇವು ಮೊದಲಾಗಿ ಹುಟ್ಟುವ ತಿಳಿವು ಶ್ರಾವಣಪ್ರತ್ಯಕ್ಷ ಎನ್ನಿಸುವುದು. ನಾಲಗೆಯಿಂದ ಸವಿದರೆ, ಇದು ಮಧುರ, ಇದು ಹುಳಿ, ಇದು ಉಪ್ಪು ಎಂದು ಇವು ಮೊದಲಾಗಿ ಹುಟ್ಟುವ ತಿಳಿವು ಜಿಹ್ವಾಪ್ರತ್ಯಕ್ಷ ಎನ್ನಿಸುವುದು. ಮೂಗಿನಿಂದ ಒಂದನ್ನು ಮೂಸಿನೋಡಿದರೆ, ಇದು ಒಳ್ಳೆಯ ಕಂಪು, ಇದು ಹೊಲಸು ಕಂಪು ಎಂದು ಇವು ಮೊದಲಾಗಿ ಹುಟ್ಟುವ ತಿಳಿವು ಘ್ರಾಣಪ್ರತ್ಯಕ್ಷ ಎನ್ನಿಸುವುದು. ಮೈಯ ತೊಗಲನ್ನು ಸೋಕಿದರೆ, ಇದು ಬಿಸುಪು, ಇದು ತಂಪು ಎಂದು ಇವು ಮೊದಲಾಗಿ ಹುಟ್ಟುವ ತಿಳಿವು ಸ್ಪಾರ್ಶನಪ್ರತ್ಯಕ್ಷ ಎನ್ನಿಸುವುದು. ಮನಸ್ಸಿನಲ್ಲಿ ಭಾವಿಸಿದರೆ, ತನಗೆ ಈಗ ಸುಖವಾಗಿರುವುದು, ಈಗ ದುಃಖವಾಗಿರುವುದು ಎಂಬ ಇವು ಮೊದಲಾಗಿ ಹುಟ್ಟುವ ತಿಳಿವು ಮಾನಸಪ್ರತ್ಯಕ್ಷ ಎನ್ನಿಸುವುದು. ಹೀಗೆ ಪ್ರತ್ಯಕ್ಷ (ಎಂಬುದು) ಆರು ತೆರನಾಗಿ ಇರುವುದು. ಅನುಮಾನ ಎಂಬುದು—ಬೇರೊಂದನ್ನು ಬಿಟ್ಟು ತಾನು ಒಂದು ಎಡೆಯಲ್ಲೂ ಇರದ ವಸ್ತುವನ್ನು ಕಂಡು, ಆ ಎಡೆಯಲ್ಲಿ ಬೇರೊಂದನ್ನು ತಿಳಿಯುವುದು. ಅದು ಹೇಗೆಂದರೆ—ಬೆಂಕಿಯನ್ನು ಬಿಟ್ಟು ಹೊಗೆ ಇರದು ಎಂಬ ನಿಯಮವನ್ನು ಅಡಿಗೆಮನೆಯಲ್ಲಿ ನಿಶ್ಚಯಮಾಡಿ, ಬೆಟ್ಟ ಮೊದಲಾದ ಬೇರೊಂದು ಎಡೆಯಲ್ಲಿ ಹೊಗೆಯನ್ನು ಕಂಡು, ಅಲ್ಲಿ ಬೆಂಕಿಯುಂಟು ಎಂದು ತಿಳಿಯುವುದು ಅನುಮಾನಪ್ರಮಾಣ ಎನಿಸುತ್ತದೆ. ಶಬ್ದಪ್ರಮಾಣವೆಂದರೆ—ಇದ್ದುದನ್ನು ಇದ್ದಂತೆ ತಿಳಿಸುವ ನುಡಿ. ಅದೂ ಲೌಕಿಕವೆಂದೂ ವೈದಿಕ

ಎಂದೂ ಎರಡು ತೆರನಾಗಿರುವುದು. ಲೌಕಿಕ ಎಂಬುದು ಲೋಕದಲ್ಲಿ ಆಪ್ತರು ನುಡಿಯುವ ನುಡಿ. ವೈದಿಕ ಎಂಬುದು ವೇದ ಮೊದಲಾದ ಹದಿನಾಲ್ಕು ವಿದ್ಯೆಗಳು. ಈ ಪ್ರತ್ಯಕ್ಷ ಅನುಮಾನ ಶಬ್ದಗಳೆಂಬ ಮೂರೂ ಪ್ರಮಾಣಗಳಿಂದ ನಿನ್ನ ಸ್ವರೂಪ ರೂಪ ಗುಣ ವಿಭವಾದಿಗಳಲ್ಲಿ ಇಷ್ಟಿಷ್ಟನ್ನು ತಿಳಿಯುವುದಲ್ಲದೆ, ಹೀಗೇ ಎಂದು ಪರಿಚ್ಛೇದ ಮಾಡುವುದು ಅಸಾಧ್ಯವಾದುದರಿಂದ ನೀನು ಅಪ್ರಮೇಯನು ಎನ್ನಿಸುವೆ. ಆದರೂ ನಿನ್ನ ಭಕ್ತಜನಸುಲಭತೆಯನ್ನು ಮೆರೆದು, ನನ್ನ ಎದೆಯೆಂಬ ಮನೆಯಲ್ಲಿ ನೆಲೆಗೊಳ್ಳುವುದು, ನೆಲೆಗೊಳ್ಳುವುದು, ಅನನ್ಯಜನಸುಲಭ, ಶ್ರೀ ಯದು ಶೈಲವಲ್ಲಭಾ !

## ನಾಲ್ಕನೆಯ ಬಿನ್ನಹ

ವೇದ, ಅದೇ ಏಕಾರ್ಥದ ಪುರಾಣ, ಮೊದಲಾದವುಗಳಲ್ಲಿ ನೀನು ವ್ಯಕ್ತವಾಗಿ ತೋರುವೆ—ಎಂದು ಆದರದಿಂದ ಸುಶೀಲನು ಯಾದವಗಿರಿನಾಥನ ಅಡಿಗೆ ಬಿನ್ನಹ ಮಾಡಿದನು.

ಸಕಲವಿದ್ಯಾಪ್ರವರ್ತಕಾ! ವಿದ್ಯೆಗಳು—ವೇದಗಳು ನಾಲ್ಕು, ಅಂಗಗಳು ಆರು, ತರ್ಕ, ಮೀಮಾಂಸೆ, ಪುರಾಣ, ಧರ್ಮಶಾಸ್ತ್ರ, ಆಯುರ್ವೇದ, ಧನುರ್ವೇದ, ಗಾಂಧರ್ವ, ಅರ್ಥಶಾಸ್ತ್ರ ಎಂದು ಹದಿನೆಂಟು ತೆರನಾಗಿರುವುದು. ಅವುಗಳಲ್ಲಿ—ಋಕ್ ಯಜುಸ್ ಸಾಮ ಅಥರ್ವಣಗಳೆಂಬ ನಾಲ್ಕು ವೇದಗಳೂ ಪೂರ್ವಭಾಗದಲ್ಲಿ ಧರ್ಮ ಅರ್ಥ ಕಾಮ ಎಂಬ ತ್ರಿವರ್ಗಕ್ಕೆ ಸಾಧನವಾದ ಕರ್ಮವನ್ನು ಹೇಳುವುವು; ಉತ್ತರಭಾಗದಲ್ಲಿ ನಿನ್ನ ಸ್ವರೂಪ ರೂಪ ಗುಣ ವಿಭವ ಮೊದಲಾದುವನ್ನು ಹೇಳಿ, ಮೋಕ್ಷಕ್ಕೆ ಉಪಾಯವನ್ನು ತೋರಿಸುವುವು. ಅಂಗಗಳಲ್ಲಿ ಶಿಕ್ಷೆ ಎಂಬುದು—ಸ್ವರ ವರ್ಣ ಮಾತ್ರಾದಿಗಳನ್ನು ನಿರೂಪಿಸುವುದು. ವ್ಯಾಕರಣ ಎಂಬುದು—ಪ್ರಕೃತಿ ಪ್ರತ್ಯಯ ಮೊದಲಾದ ಮುಖದಿಂದ ಅರ್ಥವನ್ನು ಹೇಳುವ ಪದಗಳನ್ನು ನಿರೂಪಿಸುವುದು. ಛಂದಸ್ ಎಂಬುದು—ಗಾಯತ್ರಿ ತ್ರಿಷ್ಟುಪ್ ಅನುಷ್ಟುಪ್ ಮೊದಲಾದ ಛಂದೋಲಕ್ಷಣವನ್ನು ನಿರೂಪಿಸುವುದು. ಕಲ್ಪಸೂತ್ರವೆಂಬುದು—ವೇದೋಕ್ತ

ವಾದ ಕರ್ಮಪ್ರಯೋಗವನ್ನು ನಿರೂಪಿಸುವುದು. ಜ್ಯೋತಿಷ ಎಂಬುದು ಕರ್ಮಾಚರಣಕ್ಕೆ ಕಾಲವನ್ನು ನಿರೂಪಿಸುವುದು. ವೇದಪುರುಷನಿಗೆ ಛಂದಸ್ಸು ಪಾದಗಳು, ಕಲ್ಪಸೂತ್ರ ಕೈಗಳು, ವ್ಯಾಕರಣ ಮುಖ, ಶಿಕ್ಷೆ ಘ್ರಾಣ, ಜ್ಯೋತಿಷ ಕಣ್ಣುಗಳು, ನಿರುಕ್ತ ಕಿವಿಗಳು ಆಗಿರುವದರಿಂದ ಇವು ಆರೂ ವೇದಾಂಗಗಳು ಎನಿಸುವುವು. ತರ್ಕ ಎಂಬುದು—ವೇದಾರ್ಥ ಗಳನ್ನು ಯುಕ್ತಿಗಳಿಂದ ನೆಲೆಗೆಯ್ವುದು. ಮೀಮಾಂಸೆ ಎಂಬುದು—ವೇದಾರ್ಥಗಳನ್ನು ಪೂರ್ವಪಕ್ಷ ಸಿದ್ಧಾಂತರೂಪದಿಂದ ವಿಚಾರಿಸಿ ನಿಶ್ಚಯ ಮಾಡುವುದು. ಪುರಾಣಗಳು ಎಂಬುವು—ಜಗತ್ ಸೃಷ್ಟಿಯನ್ನೂ ಸಂಹಾರವನ್ನೂ ಮನ್ವಂತರಗಳನ್ನೂ ವಂಶವನ್ನೂ ವಂಶದಲ್ಲಿ ಹುಟ್ಟಿದವರ ಚರಿತ್ರೆಯನ್ನೂ ಹೇಳಿದ ಬ್ರಾಹ್ಮ ಪಾದ್ಮ ಮೊದಲಾದ ಹದಿನೆಂಟು ತೆರನಾಗಿರುವುದು. ಧರ್ಮಶಾಸ್ತ್ರ ಎಂಬುದು—ಆಚಾರ ವ್ಯವಹಾರ ಪ್ರಾಯಶ್ಚಿತ್ತಗಳನ್ನು ಹೇಳುವ ಮನು ಯಾಜ್ಞ್ಯವಲ್ಕ್ಯ ಮೊದಲಾಗಿ ಹದಿನೆಂಟು ತೆರನಾಗಿರುವುದು. ಆಯುರ್ವೇದ ಎಂಬುದು—ವ್ಯಾಧಿ ನಿದಾನ ಚಿಕಿತ್ಸೆ ಮೊದಲಾದುವನ್ನು ನಿರೂಪಿಸುವುದು. ಧನುರ್ವೇದ ಎಂಬುದು—ಅಸ್ತ್ರಶಸ್ತ್ರಪ್ರಯೋಗ ಉಪಹಾರ ಮೊದಲಾದವುಗಳನ್ನು ನಿರೂಪಿಸುವುದು. ಗಾಂಧರ್ವ ಎಂಬುದು—ನೃತ್ಯ ಗೀತ ವಾದ್ಯ ಮೊದಲಾದವುಗಳನ್ನು ನಿರೂಪಿಸುವುದು. ಅರ್ಥಶಾಸ್ತ್ರ ಎಂಬುದು—ಪ್ರಜಾಪರಿಪಾಲನ ಮೊದಲಾದ ರಾಜನೀತಿಗಳನ್ನು ನಿರೂಪಿಸುವುದು. ಈ ಹದಿನೆಂಟು ವಿದ್ಯೆಗಳನ್ನು ನೀನೇ ಲೋಕಹಿತಾರ್ಥವಾಗಿ ನೆಗಳ್ದುದರಿಂದ ನೀನೇ ಸಕಲ ವಿದ್ಯಾಪ್ರವರ್ತಕ ಎನ್ನಿಸುವೆ. ಇಷ್ಟು ವಿದ್ಯೆಗಳಲ್ಲೂ ಪ್ರಧಾನವಾದ ವೇದಾಂತದಲ್ಲಿ ಪ್ರಕಾಶವಾದ ನಿನ್ನ ಸ್ವರೂಪವನ್ನು ತಿಳಿಸಿ, ನನ್ನ ಮನಸ್ಸಿನ ಜಡರನ್ನು ಕಳೆದು, ನಿನ್ನ ಅಡಿಯಲ್ಲಿ ಜ್ಞಾನಭಕ್ತಿಗಳನ್ನು ಬಲಿಯಿಸುವುದು, ಬಲಿಯಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಐದನೆಯ ಬಿನ್ನಹ

ಸಕಲಾತ್ಮಕಾ! ಸಕಲ ಜಗದ್ವ್ಯಾಪಾರವು ನಿನ್ನದಾಗಲು, ಸಕಲ ವೇದವೂ ನಿನ್ನನ್ನು ಪ್ರಕಟಿಸುವುದು—ಎಂದು ಸಕಲನು ಯದುಶೈಲಪತಿಗೆ ಬಿನ್ನಹಮಾಡಿದನು.

ಸಕಲ ವೇದವೇದ್ಯಾ! ವೇದಗಳು—ಪೂರ್ವಭಾಗದಲ್ಲಿ ಯಜ್ಞಾದಿ ಸತ್ಕರ್ಮಗಳನ್ನು ಸಾಂಗವಾಗಿ ಆಚರಿಸುವ ಕ್ರಮವನ್ನು, ಅದರಲ್ಲಿ ಬರುವ ಫಲವನ್ನು, ಹೇಳುವುವು; ಉತ್ತರಭಾಗದಲ್ಲಿ ಸಂಸಾರವನ್ನು ಜರೆದು, ಜೀವಸ್ವರೂಪವನ್ನು ಪರಬ್ರಹ್ಮಸ್ವರೂಪವನ್ನು ನಿರೂಪಿಸಿ, ಮೋಕ್ಷೋಪಾಯವನ್ನು ವಿಧಿಸಿ, ಮೋಕ್ಷಾನಂದವನ್ನು ಹೊಗಳುವುವು. ಹೀಗೆ ನಾನಾ ವಿಧವಾಗಿರುವ ವೇದವಷ್ಟೂ ನಿನ್ನನ್ನೇ ಹೊಗಳುವುದು ಎಂದು ಹಿರಿಯರು ಹೇಳುವರು. ಆ ನೆಲೆಯನ್ನು ಭಾವಿಸಲು, ಲೋಕದಲ್ಲಿ ಕೈವಾರಿಗಳು ಅರಸನನ್ನು ಹೊಗಳುವ ಎಡೆಯಲ್ಲಿ ನಾಡು ಬೀಡುಗರು ಅರಸನ ಆಜ್ಞೆಯನ್ನು ಹಿಡಿದು ನಡೆಯುವ ಬಗೆಯನ್ನು, ಅದಕ್ಕೆ ಒಲಿದ ಅರಸನು ಅವರಿಗೆ ತಕ್ಕುದನ್ನು ಕೊಡುವ ಬಗೆಯನ್ನು, ಆಳುಗಳ ನೆಲೆಯನ್ನು, ಅರಸನ ನೆಲೆಯನ್ನು, ಅರಸನ ಸಮ್ಮುಖವನ್ನು ಪಡೆವ ತೆರನನ್ನು, ಸಮ್ಮುಖದಲ್ಲಿ ಇರುವವರ ಸುಖವನ್ನು ವರ್ಣಿಸಿದರೂ ಅರಸನನ್ನೇ ಹೊಗಳುವರು ಎನ್ನುತ್ತಾರೆ. ಹೀಗೆ ವರ್ಣಾಶ್ರಮದವ ರೆನ್ನಿಸುವ ನಿನ್ನ ನಾಡುಬೀಡುಗರು ನಡಸುವ ಯಜ್ಞಾದಿ ಕರ್ಮಗಳೆನಿ ಸುವ ನಿನ್ನ ಆಜ್ಞೆಯ ಊಳಿಗವನ್ನು, ಅದಕ್ಕೆ ಒಲಿದು ನೀನು ಕೊಡುವ ಐಹಿಕ ಆಮುಷ್ಮಿಕ ಫಲವೆನ್ನಿಸುವ ಜೀವಿತವನ್ನು, ಜೀವಾತ್ಮರೆನ್ನಿಸುವ ನಿನ್ನ ಊಳಿಗದವರ ನೆಲೆಯನ್ನು, ಪರಬ್ರಹ್ಮವೆನಿಸುವ ನಿನ್ನ ನೆಲೆಯನ್ನು, ಮೋಕ್ಷೋಪಾಯವೆನಿಸುವ ನಿನ್ನ ಸಮ್ಮುಖವನ್ನು ಪಡೆಯಲು ತಕ್ಕ ನಡತೆಯನ್ನು, ಮೋಕ್ಷಾನಂದವೆನ್ನಿಸುವ ನಿನ್ನ ಸಮ್ಮುಖದಲ್ಲಿ ಇರುವವರ ಸುಖವನ್ನು ನಿರೂಪಿಸುವುದರಿಂದ ಈ ವೇದವೆಲ್ಲವೂ ನಿನ್ನನ್ನೇ ಹೊಗಳು ವುದು ಎಂಬುದು ಸಿದ್ಧವು. ಈ ಅರ್ಥವನ್ನು ಚಿತ್ತದಲ್ಲಿ ಇಟ್ಟೇ "ವೇದೈಶ್ಚ ಸರ್ವೈಃ ಅಹಮೇವ ವೇದ್ಯಃ" ಎಂದು ಗೀತೆಯಲ್ಲಿ ಹೇಳಿದುದು. ಹೀಗೆ ವೇದವೇದ್ಯನಾದ ನಿನ್ನ ಅತಿಶಯವನ್ನೆ ಸಕಲ ಸ್ಮೃತಿ ಇತಿಹಾಸಪುರಾಣ ಆಗಮಗಳೂ ವರ್ಣಿಸುವುವು. ವರ್ಣಿಸಿಯೂ ಕಡೆಗಾಣಲಾರವು ಎಂದ ಮೇಲೆ, ಉಳಿದ ಮನುಷ್ಯರು ಸ್ವಯತ್ನದಿಂದ ನಿನ್ನ ನೆಲೆಯನ್ನು ತಿಳಿದು ಭಜಿಸಿ ಕಡೆಕಾಣುವರು ಎಂಬುದು ಮನೋರಥ ಮಾತ್ರವೇ. ಅದರಿಂದ, ನೀನೇ ದಯೆಗೈದು ನಿನ್ನ ಸ್ವರೂಪವನ್ನು ತಿಳಿಸಿ, ನನ್ನನ್ನು ನಿನ್ನ ಊಳಿಗ

ದವನು ಎನ್ನಿಸುವುದು, ಎನ್ನಿಸುವುದು, ಅನನ್ಯಜನಸುಲಭ, ಶ್ರೀ ಯದು ಶೈಲವಲ್ಲಭಾ!

## ಆರನೆಯ ಬಿನ್ನಹ

ಪ್ರತಿಬರಿಸಿ ತೋರುವ ವೇದದ ನುಡಿಗಳೂ ಉಪದೇಶದಲ್ಲಿ ಅವಿರುದ್ಧವಾಗುವುವು—ಎಂದು ಅಡಿಗೆ ಎರಗಿ, ಹೊಟ್ಟೆಯಲ್ಲಿ ಹೂವುಳ್ಳವನಿಗೆ ಅರಿನ್ನ ಪಪಾಲಮಸ್ತಕಶೂಲನು ಬಿನ್ನವಿಸಿದನು.

ಅದ್ಭುತಚರಿತಾ! ವೇದಗಳು ನಿನ್ನ ಸ್ವರೂಪ ರೂಪ ಗುಣ ವಿಭವಗಳನ್ನು ಹಲವು ಎಡೆಯಲ್ಲಿ ಹಲವು ತೆರದಿಂದ ಹೇಳಿ ತಿಳಿಸುವುವು. ಗುರುಮುಖದಿಂದ ಕೇಳುವವರಿಗೆ ಈ ಅರ್ಥವು ಸುವ್ಯಕ್ತವಾಗಿ ತೋರುವುದು. ತಮ್ಮ ಬುದ್ಧಿಬಲದಿಂದ ಊಹಿಸುವವರಿಗೆ ಪರಸ್ಪರ ವಿರುದ್ಧವಾಗಿ ತೋರುವುದು. ಅದು ಹೇಗೆಂದರೆ: ನಿನ್ನನ್ನು ಸಗುಣನೆಂದೂ ನಿರ್ಗುಣನೆಂದೂ ಹಿರಿದಕ್ಕಿಂತ ಹಿರಿಯನೆಂದೂ ಮಾತು ಮನಸ್ಸುಗಳಿಗೆ ಅಗೋಚರನೆಂದೂ ವೇದವೇದ್ಯನೆಂದೂ ಹುಟ್ಟುಹೊಂದುಗಳು ಇಲ್ಲದವನೆಂದೂ ಮತ್ಸ್ಯ ಮೊದಲಾದ ರೂಪಗಳಿಂದ ಹುಟ್ಟಿದವನೆಂದೂ ಹೇಳಿದರೆ, ಮಂದಮತಿಗಳಿಗೆ ವಿರೋಧವು ತೋರುವುದರಿಂದ ನಿಶ್ಚಯವು ಹುಟ್ಟದು. ಹಿರಿಯರ ಉಪದೇಶದಿಂದ ತಿಳಿಯುವವರಿಗೆ ಈ ವಿರೋಧವು ಎಂದೂ ತೋರದು. ಸಗುಣನು ಎಂದರೆ—ವಾತ್ಸಲ್ಯ ಮೊದಲಾದ ಗುಣಗಳುಳ್ಳವನೆಂದೂ ನಿರ್ಗುಣನೆಂದರೆ—ರಾಜಸ ತಾಮಸ ಆದಿಗಳು ಇಲ್ಲದವನೆಂದೂ ತೋರುವುದರಿಂದ ಸದ್ಗುಣಗಳು ಅಷ್ಟೂ ಉಂಟು, ದುರ್ಗುಣಗಳು ಒಂದೂ ಇಲ್ಲ ಎಂದು ನಿರ್ಣಯವಾಗುವುದು. ಹಿರಿದಕ್ಕಿಂತ ಹಿರಿಯನು ಎಂದರೆ—ಹದಿನಾಲ್ಕು ಲೋಕಗಳನ್ನೂ ತನ್ನ ಉದರದಲ್ಲಿ ಕೊಂಡವನೆಂದೂ, ಕಿರಿದಕ್ಕಿಂತ ಕಿರಿಯನು ಎಂದರೆ—ಕಿರಿದಾದ ಜೀವಾತ್ಮನಲ್ಲಿ ಅಂತರ್ಯಾಮಿಯಾಗಿ ಇರುವನು ಎಂದೂ ತೋರುವುದರಿಂದ, ಸಕಲ ಪದಾರ್ಥಗಳ ಒಳಗೂ ಹೊರಗೂ ವ್ಯಾಪಿಸಿರುವನೆಂದು ನಿಶ್ಚಯವಾಗುವುದು. ಸಾಕಾರನು ಎಂದರೆ—ಅಪ್ರಾಕೃತವಾದ ಶರೀರವುಳ್ಳವನು ಎಂದೂ, ನಿರಾಕಾರನು ಎಂದರೆ—ಸಕಲ ಹೇಯಕ್ಕೂ ಆಸ್ಪದವಾದ

ಪ್ರಾಕೃತಶರೀರವಿಲ್ಲದವನು ಎಂದೂ ತೋರುವುದರಿಂದ ತನ್ನ ಸ್ವರೂಪಕ್ಕೆ ಅನುಗುಣವಾಗಿ ತನ್ನ ಇಚ್ಛೆಗೆ ಅನುಗುಣವಾಗಿರುವ ದಿವ್ಯಮಂಗಳ ವಿಗ್ರಹವುಳ್ಳವನೆಂದೂ ವ್ಯಕ್ತವಾಗುವುದು. ಅವಾಙ್ಮಾನಸಗೋಚರನು ಎಂದರೆ—ಸ್ವರೂಪವೂ ವಿಗ್ರಹವೂ ಗುಣಗಳೂ ಐಶ್ವರ್ಯವೂ ಇಷ್ಟು ಎಂದು ಮಿತಿಮಾಡಿ ನುಡಿಯಲೂ ತಿಳಿಯಲೂ ಶಕ್ತನು ಅಲ್ಲ ಎಂಬುದು. ವೇದವೇದ್ಯನು ಎಂದರೆ—ಶ್ರಿಯಃಪತಿಯೂ ಅಖಿಲಹೇಯಪ್ರತ್ಯನೀಕನೂ ಜಗತ್ಕಾರಣನೂ ಸರ್ವಾಂತರ್ಯಾಮಿಯೂ ಮೋಕ್ಷಪ್ರದನೂ ಎಂಬ ಇವು ಮೊದಲಾದ ಮಹಿಮೆಗಳು ವೇದದಲ್ಲಿ ತಿಳಿಯಬರುವುವು ಎಂದು ತೋರುವುದರಿಂದ ತಾನು ತಿಳಿಯುವಷ್ಟನ್ನೂ ತಿಳಿದು, ಇನ್ನೂ ಮಹಿಮೆಗಳು ಉಂಟು ಎಂದು ಇರಬೇಕು ಎಂಬುದು ದೃಢವಾಯಿತು. ಹುಟ್ಟುಹೊಂದುಗಳು ಇಲ್ಲದವನು ಎಂದರೆ—ಕರ್ಮಕ್ಕೆ ಅಧೀನವಾದ ಜನನವಿಲ್ಲ ಎಂದೂ, ಮತ್ಸ್ಯ ಮೊದಲಾದ ರೂಪದಿಂದ ಹುಟ್ಟಿದವನು ಎಂದರೆ—ದುಷ್ಟನಿಗ್ರಹ ಶಿಷ್ಟಪರಿಪಾಲನ ಧರ್ಮಸಂಸ್ಥಾಪನ ಮೊದಲಾದ ಅರ್ಥಕ್ಕಾಗಿ ತನ್ನ ಇಚ್ಛೆಯಿಂದ ಮನುಷ್ಯಾದಿ ಆಕಾರದಿಂದ ಆವಿರ್ಭವಿಸುವನೆಂದೂ ತೋರುವುದರಿಂದ ಕರ್ಮಾಧೀನವಲ್ಲ, ಲೋಕಾನುಗ್ರಹಾರ್ಥ ಎಂದು ಸಿದ್ಧವಾಯಿತು. ಹೀಗೆ ವಿರೋಧವಿಲ್ಲದೆ ಸಕಲ ವೇದಾಂತಗಳನ್ನು ಒಂದುಮಾಡಿ ತಿಳಿದವರು ನಿನ್ನನ್ನು ಸರ್ವಾಶ್ಚರ್ಯಮಯನು ಎನ್ನುವರು. ನಿನ್ನ ನೆಲೆಯನ್ನು ನಿರೂಪಿಸಲು ನಾನು ಎಷ್ಟರವನು. ನನ್ನನ್ನು ನಿನ್ನ ನಿರ್ವ್ಯಾಜವಾದ ದಯೆಯೆಂಬ ಅಮೃತಾಬ್ಧಿಯ ತರಂಗದಲ್ಲಿ ತೇಲಿಸಿ ಲಾಲಿಸುವುದು, ಲಾಲಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಏಳನೆಯ ಬಿನ್ನಹ

ಜಗತ್ತೆಲ್ಲವೂ ನಿನ್ನ ಒಡಲಾಗಿರುವ ಬಗೆಯಲ್ಲಿ ನಚ್ಚಿ—ಎಂದು ಯದುಶೈಲನಾಥನ ಅಡಿಗೆ ನನ್ನಿಯ ನಲ್ಲನು ನಲವಿಂದ ಒಲಿದು ಬಿನ್ನಹಮಾಡಿ ಎಸೆದನು.

ಸಮಸ್ತ ಚಿತ್ ಅಚಿತ್ ವಸ್ತು ಶರೀರಕಾ! ಜಗವೆಲ್ಲವೂ ನಿನಗೆ ಶರೀರವಾಗಿಯೂ ನೀನು ಈ ಜಗಕ್ಕೆ ಪರಮಾತ್ಮನಾಗಿಯೂ ಇರುವುದ

ರಿಂದ ಜಗವೆಲ್ಲವೂ ನೀನೊಬ್ಬನೇ ಅಲ್ಲದೆ ಬೇರೆ ಇಲ್ಲ ಎಂದು ವೇದ ಶಾಸ್ತ್ರಗಳು ಹೇಳುವುವು. ಅದರ ತತ್ತ್ವವನ್ನು ತಿಳಿಯದೆ ಕೆಲವರು ಭ್ರಮಿಸಿ, ಜಗಕ್ಕೂ ನಿನಗೂ ಸ್ವರೂಪ ಭೇದವಿಲ್ಲ ಎಂದು ಹೇಳುವರು. ಅವರು ಆಡುವ ನುಡಿಗಳು ಅಷ್ಟೂ ಯುಕ್ತಿವಿರುದ್ಧವಾಗಿರುವುವು. ಅದು ಹೇಗೆಂದರೆ—ಲೋಕದಲ್ಲಿ ವಸ್ತುರೂಪವು ಎರಡಾಗಿದ್ದು, ಎರಡರ ಆಕಾರಗುಣಗಳು ಒಂದಾಗಿದ್ದರೆ, ಆ ಒಂದೇ ವಸ್ತುವನ್ನು ಕಂಡು, ಇದಕ್ಕೂ ಅದಕ್ಕೂ ಭೇದವಿಲ್ಲ ಎಂದು ಬುದ್ಧಿವಂತರು ಹೇಳುವರು. ಬ್ರಹ್ಮಕ್ಕೂ ಪ್ರಪಂಚಕ್ಕೂ ಭೇದವಿಲ್ಲ ಎಂಬವನು ಈ ಪ್ರಪಂಚವೇ ಬ್ರಹ್ಮ ಎಂದರೆ, ಬೇರೆ ಬ್ರಹ್ಮ ಇಲ್ಲ ಎಂಬ ಶೂನ್ಯವಾದಿಯಾಗುವನು; ಬ್ರಹ್ಮವೇ ಪ್ರಪಂಚವೆಂದರೆ—ಬ್ರಹ್ಮವೊಂದೆ ಅಲ್ಲದೆ ಬೇರೊಂದೂ ಇಲ್ಲ ಎಂದು ನುಡಿವ ತಾನೂ ತನ್ನ ನುಡಿಯೂ ತನಗೆ ಉಪದೇಶ ಕೊಟ್ಟ ಗುರುವೂ ಆ ಗುರು ಓದಿದ ವೇದಾಂತವೂ ಇಲ್ಲ ಎಂಬುದರಿಂದ ನಾಸ್ತಿಕ ವಾದಿಯಾಗುವನು. ಹೀಗೆ ಶುದ್ಧಾದ್ವೈತವು ಶಾಸ್ತ್ರವಿರುದ್ಧವಾಗಿದ್ದರೂ ನಿನ್ನ ಕಟಾಕ್ಷಕ್ಕೆ ವಿಷಯರಲ್ಲದವರು ಈ ಪಕ್ಷವನ್ನೇ ಅಂಗೀಕರಿಸಿ, ನಿನ್ನ ಜ್ಞಾನ ಬಲ ಐಶ್ವರ್ಯ ವೀರ್ಯ ಶಕ್ತಿ ತೇಜಸ್ಸು ಸೌಶೀಲ್ಯ ವಾತ್ಸಲ್ಯ ಮಾರ್ದವ ಆರ್ಜವ ಸೌಹಾರ್ದ ಸಾಮ್ಯ ಕಾರುಣ್ಯ ಮಾಧುರ್ಯ ಗಾಂಭೀರ್ಯ ಔದಾರ್ಯ ಚಾತುರ್ಯ ಸ್ಥೈರ್ಯ ಶೌರ್ಯ ಪರಾಕ್ರಮ ಸತ್ಯಕಾಮ ಸತ್ಯಸಂಕಲ್ಪ ಕೃತಿತ್ವ ಕೃತಜ್ಞತಾ ಮೊದಲಾದ ಅಸಂಖ್ಯೇಯ ಕಲ್ಯಾಣಗುಣಗಣಗಳೂ, ದಿವ್ಯಮಂಗಳವಿಗ್ರಹವೂ, ದಿವ್ಯಭೂಷಣಗಳೂ, ದಿವ್ಯಾಯುಧಗಳೂ, ದಿವ್ಯಮಹಿಷೀವರ್ಗವೂ, ನಿತ್ಯಮುಕ್ತರೂ, ಶ್ರೀ ವೈಕುಂಠವೂ ಇಷ್ಟೂ ಇಲ್ಲವೆಂದು, ಮತ್ತು ನಿನ್ನ ಲೀಲಾಪರಿಕರವಾದ ಬ್ರಹ್ಮಾಂಡವೂ ಅದರೊಳಗಿರುವ ಹದಿನಾಲ್ಕು ಲೋಕಗಳೂ ಬ್ರಹ್ಮ ರುದ್ರಾದಿ ದೇವರುಗಳೂ ಸಪ್ತ ದ್ವೀಪಗಳೂ ಸಪ್ತ ಸಾಗರಗಳೂ ಪರ್ವತಗಳೂ ನದಿಗಳೂ ದೇಶಗಳೂ ಗ್ರಾಮಗಳೂ ತಮ್ಮನ್ನು ಹೆತ್ತ ತಾಯಿತಂದೆಗಳೂ ತಾವೂ ಇಲ್ಲವೆಂದೂ, ಇಲ್ಲದಿರುವ ವೇದಾಂತಗಳಿಂದ ಇವೆಲ್ಲವನ್ನು ತಿಳಿದೆವೆಂದೂ, ಈ ರೀತಿಯಲ್ಲಿ ನಿನ್ನ ನಿತ್ಯವಿಭೂತಿ ಲೀಲಾವಿಭೂತಿಗಳನ್ನು ಅಪಲಪಿಸುವರು. ಅವರಲ್ಲಿ ನೀನು ನೆಲಸಿರುವ ರೀತಿ ಹೇಗೋ! ಅದು ಹಾಗಿರಲಿ. ನಿನ್ನನ್ನೇ ನೆರೆ

ನಂಬಿ ನಿನ್ನ ಕಟಾಕ್ಷವನ್ನು ಪಡೆದ ಮಹಾತ್ಮರು ಸಕಲ ವೇದಶಾಸ್ತ್ರಗಳಿಗೆ ಅನುಗುಣವೂ ಯುಕ್ತಿಯುಕ್ತವೂ ಆದ ವಿಶಿಷ್ಟಾದ್ವೈತವನ್ನೇ ಅಂಗೀಕರಿಸಿರುವರು. ಅದು ಹೇಗೆಂದರೆ—ಒಬ್ಬನ ಶರೀರದಲ್ಲಿ ಪೃಥ್ವಿ ಮೊದಲಾದ ತತ್ತ್ವಗಳು ಇಪ್ಪತ್ತುನಾಲ್ಕೂ ಜೀವಾತ್ಮನೂ ಅಂತರ್ಯಾಮಿಯಾದ ನೀನೂ ಕೂಡಿ ಇಪ್ಪತ್ತಾರು ತತ್ತ್ವಗಳು ಇದ್ದರೂ ಮನುಷ್ಯನು ಒಬ್ಬನು ಇದ್ದಾನೆ. ಹಾಗೆ, ಈ ಚೇತನ ಅಚೇತನಗಳು ಎಲ್ಲವೂ ಬೇರೆ ಆಗಿದ್ದರೂ ನಿನ್ನ ಶರೀರವಾಗಿರುವದರಿಂದ ನೀನೊಬ್ಬನೇ ಎಂಬುದು ಯುಕ್ತ. ಈ ತತ್ತ್ವಜ್ಞಾನವು ನನ್ನ ಮನಸ್ಸಿನಲ್ಲಿ ನೆಲೆಗೊಳ್ಳುವಂತೆ ನೀನು ಕರುಣಿಸುವುದು, ಕರುಣಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ !

## ಎಂಟನೆಯ ಬಿನ್ನಹ

ಕನಸಿನಲ್ಲಿ ಈಕ್ಷಿಸುವ ವಸ್ತುಗಳಷ್ಟೂ ನೀನು ಸೃಷ್ಟಿಗೈದ ಬಗೆಯಿಂದ ಬಿಟ್ಟ—ಎಂದು ಅನುಗೊಳಿಸಿ, ಮಲೆವರ ಗಂಡನು ಅಸುರಾರಿಯ ಅಡಿಗೆ ಮನವೊಲಿದು ಬಿನ್ನವಿಸಿದನು.

ಅಘಟಿತಘಟನಾಸಮರ್ಥಾ! ಮನುಷ್ಯರಿಗೆ ಜಾಗರ ಸ್ವಪ್ನ ಸುಷುಪ್ತಿಗಳೆಂದು ಮೂರು ಅವಸ್ಥೆಗಳು ಉಂಟು. ಅವುಗಳಲ್ಲಿ ಸುಷುಪ್ತಿ ಎಂಬುದು—ನಿದ್ರೆ, ಸ್ವಪ್ನ ಎಂಬುದು—ಕನಸು, ಜಾಗರ ಎಂಬುದು—ಎಚ್ಚರಿಕೆ. ನಿದ್ದೆಯಲ್ಲಿ ಜೀವಾತ್ಮನು ಪರಮಾತ್ಮನಾದ ನಿನ್ನಲ್ಲಿ ಹುದುಗಿ, ಜ್ಞಾನೇಂದ್ರಿಯವ್ಯಾಪಾರವನ್ನು ಬಿಟ್ಟಿರುವುದರಿಂದ ಹೊರಗೂ ಒಳಗೂ ತಿಳಿವಿಲ್ಲದೆ ಇರುವುದು. ಎಚ್ಚರದಲ್ಲೂ ಕನಸಿನಲ್ಲೂ ತಿಳಿವು ಉಂಟಾಗಿರುವುದು. ಎಚ್ಚರದಲ್ಲಿ ಕಾಣುವ ವಸ್ತುಗಳನ್ನು ನೀನು ಸೃಷ್ಟಿಕ್ರಮದಿಂದ ಸೃಜಿಸಿದುದರಿಂದ, ಈ ವಸ್ತು ಇದರಿಂದ ಹುಟ್ಟುವುದು, ಇದಕ್ಕೆ ಇದೇ ಹೆಸರು, ಈ ಆಕಾರ, ಈ ಗುಣ, ಇದರಿಂದ ಆಗುವ ಕಾರ್ಯ ಇದು, ಈ ವಸ್ತು ಇಷ್ಟು ಕಾಲವಿರುವುದು ಎಂದು ಮಿತಿಯಾಗಿರುವುದು. ಇರುವ ಕಾಲದಲ್ಲಿ ಎಲ್ಲರಿಗೂ ತಿಳಿಯಬರುವುದು. ಕನಸಿನಲ್ಲಿ ಕಾಣುವ ವಸ್ತುಗಳನ್ನು ನೀನು ತತ್ಕಾಲದಲ್ಲಿ ಸಂಕಲ್ಪಮಾತ್ರದಿಂದ ಸೃಜಿಸುವುದರಿಂದ ಈ ವಸ್ತು ಇದರಿಂದ ಹುಟ್ಟುವುದೆಂದೂ, ಇದಕ್ಕೆ ಇದೇ ಆಕಾರ,

ಇದೇ ಗುಣ, ಇದೇ ಕಾರ್ಯ--ಎಂಬ ಇವು ಮೊದಲಾದ ಮಿತಿಯೊಂದೂ ಇಲ್ಲದೆ ವಿಚಿತ್ರವಾಗಿ ನಿನ್ನ ಸಂಕಲ್ಪವಿದ್ದಂತೆ ಇರುವುದು. ಆ ಕಾಲದಲ್ಲಿ ಕನಸನ್ನು ಕಾಣುವವನೊಬ್ಬನಿಗೆ ಕಾಣಿಸಿತಲ್ಲದೆ, ಮಿಕ್ಕಿನ ಒಬ್ಬನಿಗೂ ಕಾಣಿಸದು. ಹೀಗೆ ಜಾಗರದಲ್ಲಿ ಕಾಣುವ ವಸ್ತು ಎಲ್ಲರಿಗೂ ಕಾಣಿಸುತ್ತಾ ಸ್ಥಿರವಾಗಿಯೂ, ಕನಸಿನಲ್ಲಿ ಕಾಣುವ ವಸ್ತು ಒಬ್ಬನಿಗೆ ಕಾಣಿಸುತ್ತಾ ಎಚ್ಚತ್ತೊಡನೆ ಹೋಗುವುದರಿಂದ ಅನಿತ್ಯವಾಗಿರುವುದು. ಲೋಕಮರ್ಯಾದೆ ಹೀಗಿದ್ದರೂ ನೀನು ಒಬ್ಬರಲ್ಲಿ ದಯೆಗೈದು ಮಿತಿಯನ್ನು ಪಲ್ಲಟಿಸಿ ತೋರಿಸುವೆ. ಅದು ಹೇಗೆಂದರೆ—ಮೊದಲು ಗೋಕುಲದಲ್ಲಿ ಬಲಭದ್ರನ ಚಾಡಿಯ ಮಾತನ್ನು ಕೇಳಿ, ಮಣ್ಣನ್ನು ಮೆಲ್ಲದಿರು ಎಂದು ಬೆದರಿಸುವ ಯಶೋದೆಗೆ ನಿನ್ನ ಕಿರಿದಾದ ಕೆಂಪುಬಾಯಿ ತೆರೆದು ಹದಿನಾಲ್ಕು ಲೋಕಗಳನ್ನೂ ಆರೂ ಅರಿಯದಂತೆ ತೋರಿಸಿದೆ. ಹಾಗೇ ಎರಡು ತಟ್ಟಿನ ನಟ್ಟನಡುವೆ ಆರೂ ಅರಿಯದ ಹಾಗೆ ವಿಶ್ವರೂಪವನ್ನು ಅರ್ಜುನನಿಗೆ ತೋರಿಸಿದೆ. ಮತ್ತೆ ಸೈಂಧವನನ್ನು ಕೊಲ್ಲಿಸಿ ಅರ್ಜುನನನ್ನು ಉಳಿಸಬೇಕು ಎಂದು ಕುರುಕ್ಷೇತ್ರದಲ್ಲಿ ಹಗಲಲ್ಲೇ ರಾತ್ರಿಯನ್ನು ಉಂಟುಮಾಡಿದೆ. ಮತ್ತೂ ಗಂಗೆಯಲ್ಲಿ ಮುಳುಗಿದ ಸುಚರಿತನೆಂಬ ಹಾರುವನನ್ನು ಕಲ್ಯಾಣೀ ತೀರ್ಥದ ಮಧ್ಯದಲ್ಲಿ ಉಣ್ಮಿಸಿದೆ. ಹೀಗೆ ಪರೋಕ್ಷವಲ್ಲದೆ ಸಾಕ್ಷಾತ್ಕಾರವಾಗಿ ನನಗೆ ಕನಸಿನಲ್ಲಿ ನೀನು ಕರುಣಿಸಿದ ನಂದಕವೆಂಬ ಹೆಸರುಪಡೆದ ಅತ್ಯುತ್ತಮವಾದೊಂದು ಕತ್ತಿಯನ್ನು ಸ್ವಾಪ್ನಪದಾರ್ಥದಂತೆ ತತ್ಕಾಲಮಾತ್ರಕ್ಕೆ ಅನುಭವ್ಯವಲ್ಲದೆ ನಿತ್ಯವೆನ್ನಿಸಿ, ಎಚ್ಚರದಲ್ಲೂ ಎಲ್ಲರಿಗೂ ಕಾಣಿಸುತ್ತಾ ನೀನು ಕೊಟ್ಟಮಹಿಮೆಯಿಂದ ಒಂದೆ ಸೂಠಿಯಲ್ಲಿ ಕವಿದು ಮುತ್ತಿದ ನಾಲ್ಕು ದೆಸೆಯ ಹಗೆವರ ಮೊತ್ತವನ್ನು ಕತ್ತರಿಸಿ ಜಯವನ್ನು ಕೈಕೊಂಡು, ನನ್ನನ್ನು ನಿನ್ನ ಊಳಿಗಕ್ಕೆ ಈಡಾಗುವಂತೆ ಮಾಡಿದೆ. ನಿನ್ನ ದಿವ್ಯಾದ್ಭುತಗುಣಾಬ್ಧಿಯಲ್ಲಿ ವೇದಗಳೂ ಬ್ರಹ್ಮಾದಿಗಳೂ ಒಂದು ತುಂತುರಹನಿಯಷ್ಟನ್ನೂ ಈಂಡಲರಿಯರು, ನಾನು ಎಷ್ಟರವನು? ನಿನ್ನ ಮಹಿಮಾರ್ಣವವನ್ನು ವರ್ಣಿಸುವೆನೆಂದು ಪ್ರತಿಜ್ಞೆಮಾಡಿದ ನನ್ನ ಸಾಹಸವನ್ನು ಸೈರಿಸಿ, ನಿನ್ನವನು ಎಂದು ನಲಿಯಿಸುವುದು, ನಲಿಯಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಒಂಬತ್ತನೆಯ ಬಿನ್ನಹ

ಮಿತಿಮಾಡಿದ ಕರ್ಮಗತಿಯನ್ನು ಜೊತೆಗೊಂಡೇ ಸೃಷ್ಟಿಮಾಡುವ ನೀನು ಸರ್ವಸಮನೆಂಬುದು ಸತ್ಯ—ಎಂದು ಲೋಕೈಕ ವೀರನು ಶೌರಿಯಲ್ಲಿ ಬಿನ್ನಹವನ್ನು ಒರೆದು ಉರೆ ನೆಗಳ್ದನು.

ಸಕಲಲೋಕನಿಯಾಮಕಾ ! ನೀನು ಈ ಸಂಸಾರದಲ್ಲಿ ಒಬ್ಬೊಬ್ಬನಿಗೆ ಪಟ್ಟಾಭಿಷೇಕಾದಿ ಸುಖವನ್ನೂ ಒಬ್ಬೊಬ್ಬನಿಗೆ ಶಿರಚ್ಛೇದನಾದಿ ದುಃಖವನ್ನೂ ಮಾಡುವುದರಿಂದ ವಿಷಮನು ಎಂದೂ, ಕರ್ಮಕ್ಕೆ ಅನುಗುಣವಾದ ಫಲವನ್ನು ಕೊಡುವುದರಿಂದ ಕರ್ಮಕ್ಕೆ ಪರತಂತ್ರನು ಎಂದೂ, ಪಾಪಿಗಳು ಪಡುವ ದುಃಖವನ್ನು ಪರಿಹರಿಸದೆ ನೋಡುತ್ತಿರುವುದರಿಂದ ನಿರ್ದಯನು ಎಂದೂ ಸ್ವಲ್ಪಬುದ್ಧಿಗಳಿಗೆ ತೋರುವುದು. ಇದರ ನೆಲೆಯನ್ನು ವಿಚಾರಿಸಿದರೆ, ನೀನು ಒಡೆಯನಾದುದರಿಂದ ನಿನ್ನ ಆಳುಗಳು ಎನ್ನಿಸುವ ಜೀವರು ಅಷ್ಟರಲ್ಲೂ ಸಮಬುದ್ಧಿಯಿಂದ ಎಲ್ಲರೂ ನಿನ್ನ ಮನಸ್ಸು ಬರುವಂತೆ ಊಳಿಗವನ್ನು ಮಾಡಿ ಬದುಕಬೇಕು ಎಂದು ಎಣಿಸಿ, ಹೀಗೆ ಹೀಗೆ ನಡೆಯುವವರಿಗೆ ಮೋಕ್ಷವೆಂದೂ, ಹೀಗೆ ಹೀಗೆ ನಡೆಯುವವರಿಗೆ ಇಹಪರಸೌಖ್ಯವೆಂದೂ ಮಿತಿಮಾಡಿ, ಆ ಮಿತಿಯಲ್ಲಿ ಯಾರು ಯಾರು ಯಾವ ಯಾವ ತೆರದಲ್ಲಿ ನಡೆಯುವರೋ ಅವರವರಿಗೆ ಆ ಮಿತಿಮಾಡಿದ ಫಲವನ್ನು ತಪ್ಪದೆ ಕೊಡುವುದರಿಂದ ನೀನು ಸರ್ವಸಮನು, ನಿನಗೆ ಒಬ್ಬರಲ್ಲೂ ವೈಷಮ್ಯವಿಲ್ಲ. ಹೀಗೆ ಅವರವರ ಕರ್ಮಕ್ಕೆ ಅನುಗುಣವಾಗಿ ಫಲಗಳನ್ನು ಕೊಟ್ಟೂ, ನೀನು ಸ್ವತಂತ್ರನಲ್ಲದೆ ಪರತಂತ್ರನಲ್ಲ. ಪಾಪಿಗಳಿಗೆ ಪಾಪಾನುಗುಣವಾದ ದುಃಖವನ್ನು ಕೊಡುತ್ತಾ ಅಜಾಮಿಳ ಮೊದಲಾದ ಒಬ್ಬೊಬ್ಬರಲ್ಲಿ ಮಿತಿಮೀರಿ ದಯೆಗೈದುದರಿಂದ ಪರಮದಯಾಳು ಎನ್ನಿಸುವೆ. ಅದು ಹೇಗೆಂದರೆ—ಲೋಕದಲ್ಲಿ ಧಾರ್ಮಿಕನಾಗಿರುವ ಅರಸನೊಬ್ಬನು ತನ್ನ ನಾಡಿನಲ್ಲಿ ಹೀಗೆ ನಡೆಯುವವರನ್ನು ಮನ್ನಿಸುವೆನು, ಹೀಗೆ ನಡೆವವರನ್ನು ದಂಡಿಸುವೆನು, ಎಂದು ಮೊದಲೇ ಮಿತಿಮಾಡಿ, ಆ ಮಿತಿಯಿದ್ದ ಹಾಗೆ ಇವರು ಅವರು ಎನ್ನದೆ ನಿಗ್ರಹ ಅನುಗ್ರಹಗಳನ್ನು ನಡೆಯಿಸಿದರೆ, ಪಕ್ಷಪಾತವಿಲ್ಲದೆ ಸರ್ವಸಮನೆನ್ನುವರು; ತಾನು ಮಿತಿಮಾಡಿದ ಮಿತಿಯನ್ನು ಬಿಡದೆ ತಾನು

ನಡೆಯಿಸುವುದರಿಂದ ತಾನು ಸ್ವತಂತ್ರನೆನ್ನುವರು; ತಪ್ಪಿದವರನ್ನು ದಂಡಿಸುವ ಎಡೆಯಲ್ಲಿ ಎಲ್ಲಿಯಾದರೂ ಒಬ್ಬನಲ್ಲಿ ತಪ್ಪಿದ್ದೂ ಮನ್ನಿಸಿದರೂ, ದಯಾಳು ಎನ್ನುವರು. ಹಾಗೆ ನೀನು ನಿನ್ನ ಆಜ್ಞಾರೂಪವಾದ ಕರ್ಮಕ್ಕೆ ಅನುಗುಣವಾಗಿ ಫಲವನ್ನು ಕೊಡುವುದರಿಂದ ಸರ್ವಸಮನೂ, ಆ ಮಿತಿ ತಪ್ಪದಂತೆ ನಡೆಯಿಸುವುದರಿಂದ ಸ್ವತಂತ್ರನೂ, ಒಬ್ಬೊಬ್ಬರ ತಪ್ಪನ್ನು ಮನ್ನಿಸುವುದರಿಂದ ದಯಾಳುವೆಂದೂ ಹಿರಿಯರಿಂದ ಕೇಳಿ, ನಿನ್ನನ್ನು ನೆರೆನಂಬಿದ ನನ್ನ ತಪ್ಪನ್ನು ಒಪ್ಪುಗೈದು ಕರುಣಿಸುವುದು, ಕರುಣಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಹತ್ತನೆಯ ಬಿನ್ನಹ

ಪರಿಪರಿಯ ಜಗಕ್ಕೆ ಮೂರೂ ಪರಿ ಎನ್ನಿಸುವ ಕಾರಣಗಳೂ ನೀನೇ - ಎಂದು ಆ ಬಿರುನಂತೆಂಬರ ಗಂಡನು ಮುರವೈರಿಯ ಪದಕ್ಕೆ ಮುದದಿಂದ ಬಿನ್ನಹಮಾಡಿದನು.

ಸಕಲಜಗದೇಕಕಾರಣಾ! ಕಾರ್ಯವನ್ನು ಉಂಟುಮಾಡುವ ವಸ್ತು ಕಾರಣ ಎನ್ನಿಸುವುದು. ಅದು ಉಪಾದಾನಕಾರಣವೆಂದೂ ನಿಮಿತ್ತಕಾರಣವೆಂದೂ ಸಹಕಾರಿಕಾರಣವೆಂದೂ ಮೂರು ತೆರನಾಗಿರುವುದು. ಹೊಸದು ಒಂದು ಕಾರಣವನ್ನು ಪಡೆದು, ತಾನೇ ಕಾರ್ಯವೆನ್ನಿಸುವ ವಸ್ತು ಉಪಾದಾನಕಾರಣ; ಈ ಉಪಾದಾನಕಾರಣದಿಂದ ಕಾರ್ಯವನ್ನು ಉಂಟುಮಾಡುವ ತೆರವನ್ನು ಅರಿತು ಉಂಟುಮಾಡುವ ಕರ್ತೃ ನಿಮಿತ್ತಕಾರಣ; ಈ ಕರ್ತೃ ಕಾರ್ಯವನ್ನು ಉಂಟುಮಾಡುವುದಕ್ಕೆ ಬೇಡುವ ಉಪಕರಣಗಳು ಸಹಕಾರಿ ಕಾರಣಗಳು. ಇವು ಯಾವುವೆಂದರೆ—ಸ್ವರ್ಣಮಯವಾದ ಕಟಕ ಮಕುಟ ಮೊದಲಾದ ಕಾರ್ಯಕ್ಕೆ ಸ್ವರ್ಣ ಉಪಾದಾನಕಾರಣ, ಸ್ವರ್ಣಕಾರ ನಿಮಿತ್ತಕಾರಣ, ಸುತ್ತಿಗೆ ಅಡಿಗಲ್ಲು ಇಕ್ಕುಳ ಬೆಂಕಿ ನೀರು ಮೊದಲಾದುವು ಸಹಕಾರಿಕಾರಣ. ಮತ್ತೂ ಮೃಣ್ಮಯವಾದ ಘಟ ಶರಾವ ಮೊದಲಾದುವಕ್ಕೆ ಮೃತ್‌ಪಿಂಡ ಉಪಾದಾನಕಾರಣ, ಕುಂಬಾರ ನಿಮಿತ್ತಕಾರಣ, ಚಕ್ರ ಮೊದಲಾದವು ಸಹಕಾರಿಕಾರಣ. ಹೀಗೆ ಲೋಕದಲ್ಲಿ ಹುಟ್ಟುವ ಕಾರ್ಯ ಅಷ್ಟಕ್ಕೂ ಮೂರೂ ತೆರನಾದ ಕಾರಣಗಳೂ ಬೇರೆಬೇರೆಯಾಗಿರುತ್ತವೆ. ಈ ಲೋಕ

ಮರ್ಯಾದೆಯನ್ನು ಮೀರಿ, ಜಗವೆಂಬ ಕಾರ್ಯಕ್ಕೆ ನೀನೊಬ್ಬನೇ ಮೂರೂ ತೆರನಾದ ಕಾರಣವಾಗಿರುವೆ. ಅದು ಹೇಗೆಂದರೆ—ಮಹಾಪ್ರಳಯದಲ್ಲಿ ಪಂಚಮಹಾಭೂತಗಳೂ ಪಂಚತನ್ಮಾತ್ರೆಗಳೂ ಏಕಾದಶ ಇಂದ್ರಿಯ ಗಳೂ ಅಹಂಕಾರತತ್ತ್ವವೂ ಮಹತ್ತತ್ತ್ವವೂ ಕೂಡಿ, ಇಪ್ಪತ್ತು ಮೂರು ತತ್ತ್ವಗಳೂ ಪ್ರಕೃತಿಯಲ್ಲಿ ಅಡಗಿ, ಉಳಿದ ಪ್ರಕೃತಿಯೂ ಜೀವನೂ ಎಂಬ ಎರಡೂ ತತ್ತ್ವಗಳೂ ಹೆಸರೂ ಆಕಾರವೂ ಬೇರೆ ಎನಿಸಿ ತಿಳಿಯದಂತೆ ನಿನ್ನಲ್ಲಿ ಹುದುಗಿ, ನಿನ್ನ ಶರೀರವಾಗಿರುವುದರಿಂದ, ನೀನು ಒಬ್ಬನೇ ಉಳಿದಿರುವೆ. ಆ ವೇಳೆಯಲ್ಲಿ ನೀನೇ ಮೂರೂ ತೆರದ ಕಾರಣವಾಗಿ ಜಗತ್ತನ್ನು ಉಂಟುಮಾಡುವುದರಿಂದ ಜಗತ್ತು ಏಕಕಾರಣ ಎಂಬುದು ಸಿದ್ಧ. ಹೀಗೆ ಸೂಕ್ಷ್ಮಪ್ರಕೃತಿ ಜೀವಶರೀರಕನಾದ ನೀನು ಉಪಾದಾನಕಾರಣವಾದರೂ ಹೊಸತೊಂದು ಆಕಾರವನ್ನು ಪಡೆಯುವು ದೆಂಬ ಪರಿಣಾಮದೋಷವು ಪ್ರಕೃತಿಮಾತ್ರಕ್ಕಲ್ಲದೆ ನಿನ್ನ ದಿವ್ಯಾತ್ಮ ಸ್ವರೂಪಕ್ಕೆ ಇಲ್ಲ ಎಂದು ಸಕಲ ವೇದಾಂತಗಳೂ ನಿನ್ನ ಮಹಿಮೆಯನ್ನು ಹೊಗಳಿ, ಆಶ್ಚರ್ಯಪಡುವುವು. ಈ ಜಗತ್ತಿನ ಉತ್ಪತ್ತಿ ಸ್ಥಿತಿ ಮೊದಲಾದ ನಿನ್ನ ದಿವ್ಯಾದ್ಭುತ ಲೀಲೆಗಳನ್ನು ನಿರೂಪಿಸಲು ನಾನು ಎಷ್ಟರವನು! ನಿನ್ನವರು ಎನ್ನಿಸುವ ಹಿರಿಯರು ಹಲವು ಸಲ ಕಲಿಸಲು, ಒಂದೊಂದು ನುಡಿಯನ್ನು ಕಲಿತು ಓದುವ ಗಿಳಿಯ ಮರಿಯಂಥ ನನ್ನ ನುಡಿಗೆ ಚಿತ್ತ ದಲ್ಲಿ ಸಂತೋಷಪಡುವುದು, ಸಂತೋಷಪಡುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

ಅನಂತರದ ಎಂಟು ಬಿನ್ನಹ

## ಹನ್ನೊಂದನೆಯ ಬಿನ್ನಹ

*ಊಹಿಸಲು, ಜೀವನ ಚೇತನ ದೇಹಾದಿಗಳತ್ತಣಿಂದ ಬೇರೆ ಎಂಬುದು ದಿಟ— ಎಂದು, ಈ ಹದನನ್ನು ಅನವಮಲ್ಲಾಂಕನು ತಾನು ಶೌರಿಗೆ ಒಲಿದು ಬಿನ್ನಹ ಮಾಡಿದನು.*

ಪರಮಾತ್ಮಾ! ನೀನು ಸಕಲ ಜೀವಾತ್ಮವರ್ಗಕ್ಕೂ ಹಿರಿಯನಾದುದರಿಂದ ನಿನ್ನನ್ನು ಪರಮಾತ್ಮನೆಂಬುದು. ಜೀವಾತ್ಮಸ್ವರೂಪವನ್ನು ವಿಚಾರಿಸುವ ಎಡೆಯಲ್ಲಿ ಶರೀರವೇ ಜೀವಾತ್ಮನೆಂದೂ, ಬಾಹ್ಯೇಂದ್ರಿಯಗಳೇ ಜೀವಾತ್ಮನೆಂದೂ, ಸಕಲ ಶರೀರದಲ್ಲೂ ಇರುವ ಜೀವಾತ್ಮನೊಬ್ಬನೇ ಎಂದೂ, ಸ್ವತಂತ್ರನೆಂದೂ ಹೇಳುವರು. ಈ ಪಕ್ಷಗಳು ಅಷ್ಟೂ ಯುಕ್ತಿವಿರುದ್ಧಗಳಾಗಿಯೂ ಶಾಸ್ತ್ರವಿರುದ್ಧಗಳಾಗಿಯೂ ಇರುವುವು. ಅದು ಹೇಗೆಂದರೆ---ಶರೀರವೇ ಜೀವಾತ್ಮನಾದರೆ, ಮೃತಶರೀರವು ಅಚ್ಚಳಿಯದಿದ್ದೂ ಜೀವವು ಹೋಯಿತೆಂಬ ನಾಣ್ನುಡಿ ಕೂಡದು. ಚಕ್ಷುವೇ ಮೊದಲಾದ ಇಂದ್ರಿಯಗಳೇ ಜೀವಾತ್ಮನಾದರೆ, ಕುರುಡ ಕಿವುಡ ಮೊದಲಾದವರಲ್ಲಿ ಜೀವಾತ್ಮನು ಇಲ್ಲ ಎನ್ನಬೇಕಾಗುವುದು. ಮನಸ್ಸೂ ಪ್ರಾಣವಾಯುವೂ ಜಡವಾದುದರಿಂದ ಜೀವಾತ್ಮನಲ್ಲ. ಜ್ಞಾನವೇ ಜೀವಾತ್ಮನಾದರೆ, ತಾನು ಜ್ಞಾನವುಳ್ಳವನು ಎನ್ನಕೂಡದು. ಅದರ ಬದಲು, ತಾನು ಜ್ಞಾನ ಎನ್ನಬೇಕಾಗುವುದು. ಆದ್ದರಿಂದ ಜೀವಾತ್ಮನು ಶರೀರ ಬಾಹ್ಯೇಂದ್ರಿಯ ಮನಸ್ಸು ಪ್ರಾಣ ಜ್ಞಾನಗಳಿಂದ ಬೇರೆಯಾಗಿ ಸ್ವಪ್ರಕಾಶವಾಗಿರುವುದು. ಸಕಲ ಶರೀರಗಳಲ್ಲೂ ಜೀವಾತ್ಮನು ಒಬ್ಬನೆ ಆದರೆ, ಒಬ್ಬನ ಶ್ರೇಯಸ್ಸಿಗೆ ಒಬ್ಬನು ಕರುಬುವುದೂ, ಒಬ್ಬನಿಗೆ ಒಬ್ಬನು ಹಗೆಯಾಗುವುದೂ, ಒಬ್ಬನನ್ನು ಒಬ್ಬನು ಕೊಲ್ಲುವುದೂ ಕೂಡದು; ಎಲ್ಲರ ಅಂತರಂಗವನ್ನು ಎಲ್ಲರೂ ತಿಳಿಯಬೇಕಾಗುವುದು; ಅಲ್ಲದೆ, ಒಬ್ಬನಿಗೆ ವೇದಾಂತಜ್ಞಾನ ಹುಟ್ಟಿದಮಾತ್ರಕ್ಕೆ ಎಲ್ಲರಿಗೂ ಮುಕ್ತಿಯಾಗುವುದರಿಂದ, ಹಲವರು ವೇದಾಂತ ಶ್ರವಣಮಾಡುವುದು ವ್ಯರ್ಥವಾಗುವುದು. ಜೀವಾತ್ಮನು ಸ್ವತಂತ್ರನಾದರೆ, ದುಃಖಮಯವಾದ

ಸಂಸಾರವನ್ನು ಅಂಗೀಕರಿಸನು. ಈ ಯುಕ್ತಿಗಳು ಒಡಗೂಡಿದ ಶಾಸ್ತ್ರ ವಚನಗಳಿಂದ ಜೀವಾತ್ಮರು ಹಲವರಾಗಿ ನಿನ್ನ ಆಳುಗಳಾಗಿರುವರು. ಈ ಜೀವಾತ್ಮರೆಲ್ಲರಿಗೂ ಒಡೆಯನಾಗಿ ಪರಮಾತ್ಮನೆನ್ನಿಸುವೆ. ಹೀಗೆ, ನೀನು ಒಡೆಯನೂ ನಾನು ಒಡವೆಯೂ ಎನ್ನಿಸುವ ಸ್ವ-ಸ್ವಾಮಿ ಸಂಬಂಧವನ್ನು ಇದುವರೆಗೆ ಅರಿಯದೆ ಪುರುಳು ನಾಶವಾಗಿರುವ ನನಗೆ ನೆವವಿಲ್ಲದ ದಯೆಯಿಂದ ಈಗ ತಿಳಿಸಿ ಸ್ವರೂಪವನ್ನು ಉಂಟುಮಾಡಿದ ಮೇಲೆ ಇನ್ನೂ ಶ್ರೇಯಃಪರಂಪರೆಗಳನ್ನು ಪೆಂಪುಗೈಯುವುದು, ಪೆಂಪುಗೈಯುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಹನ್ನೆರಡನೆಯ ಬಿನ್ನಹ

ನಿನ್ನ ಇಚ್ಛಾಮಾತ್ರದಲ್ಲೇ ಮೊದಲು ತತ್ತ್ವಸೃಷ್ಟಿ ನಡೆಯಿತು - ಎಂದು ಬೋಜಗದಲ್ಲಣನು ಯದುಕ್ಷ್ಮಾಭೃತ್ಸನ್ನಿಧಿಯ ಪಾದಪಂಕಜದ ಸನ್ನಿಧಿಯಲ್ಲಿ ನಿರೂಪಿಸಿದನು.

ಪರತತ್ತ್ವಸ್ವರೂಪಾ! ನಿನ್ನ ಅಧೀನವಾಗಿ ನಿನ್ನ ಶರೀರವೆನಿಸಿರುವ ತತ್ತ್ವಗಳು ಜೀವನೆಂದೂ ಪ್ರಕೃತಿಯೆಂದೂ ಎರಡಾಗಿರುವುವು. ಅವುಗಳಲ್ಲಿ ಜೀವತತ್ತ್ವವು ನಿನ್ನ ಒಡವೆಯಾಗಿ ಜ್ಞಾನಾನಂದಸ್ವರೂಪವಾಗಿ ನಿತ್ಯವಾಗಿರುವುದು. ಪ್ರಕೃತಿ ಎಂಬುದು—ತಾನು ಒಂದು, ತನ್ನಿಂದ ಹುಟ್ಟಿದ ತತ್ತ್ವಗಳು ಇಪ್ಪತ್ತಮೂರೂ ಕೂಡಿ ಇಪ್ಪತ್ತನಾಲ್ಕು ತತ್ತ್ವವಾಗಿರುವುದು. ಅದು ಹೇಗೆಂದರೆ—ಮಹಾಪ್ರಳಯದಲ್ಲಿ ಪ್ರಕೃತಿ ನಿನ್ನಲ್ಲಿ ಹುದುಗಿರುವುದು. ಅದರಲ್ಲಿ ಸತ್ತ್ವ ರಜಸ್ ತಮಸ್ಸುಗಳೆಂಬ ಮೂರು ಗುಣಗಳು ಹೆಚ್ಚುಗೆಯಿಲ್ಲದೆ ಇರುವುವು. ಆ ಪ್ರಕೃತಿಗೆ ಮಾಯೆ ಎಂದೂ ಅವಿದ್ಯೆ ಎಂದೂ ಪ್ರಧಾನ ಎಂದೂ ಹೆಸರಾಗಿರುವುದು. ಈ ಪ್ರಕೃತಿ ಕೆಳಗಡೆಯಲ್ಲೂ ಎಂಟು ದಿಕ್ಕಿನಲ್ಲೂ ಮಿತಿಯಿಲ್ಲದೆ ವ್ಯಾಪಿಸಿ, ಮೇಲುಗಡೆ ವೈಕುಂಠಲೋಕಪರ್ಯಂತವಾಗಿರುವುದು. ಹೀಗೆ ಪೂರ್ಣವಾಗಿರುವ ಪ್ರಕೃತಿಯು ಕೆಲವೆಡೆಯಲ್ಲಿ ಸತ್ತ್ವರಜಸ್ತಮೋಗುಣಗಳು ಹೆಚ್ಚುಗೆ ಪಡೆದ ಮಹತ್ತತ್ತ್ವ ಹುಟ್ಟುವುದು. ಹೀಗೆ ಒಂದೇ ಸರಿಯಲ್ಲಿ ಹೆಚ್ಚುಗೆ ಪಡೆದ ಮೂರೂ ಗುಣವುಳ್ಳ ಮಹತ್ತತ್ತ್ವದ ಒಂದೊಂದೆಡೆಯಲ್ಲಿ ಒಂದೊಂದು ಗುಣಗಳು ಮಿಕ್ಕ ಎರಡು ಗುಣಗಳನ್ನು ಮೆಟ್ಟಿ ಮಿಕ್ಕು

ಹೆಚ್ಚುಗೆ ಪಡೆಯುವುದು. ಅಲ್ಲಿ ಸತ್ತ್ವ ಹೆಚ್ಚಿದ ಎಡೆಯಲ್ಲಿ ಸಾತ್ವಿಕವೆಂದೂ, ರಜಸ್ಸು ಹೆಚ್ಚಿದ ಎಡೆಯಲ್ಲಿ ರಾಜಸವೆಂದೂ, ತಮಸ್ಸು ಹೆಚ್ಚಿದ ಎಡೆಯಲ್ಲಿ ತಾಮಸವೆಂದೂ ಮೂರೂ ತೆರದ ಅಹಂಕಾರತತ್ತ್ವ ಹುಟ್ಟುವುದು. ಇದರಲ್ಲಿ ಸಾತ್ವಿಕಾಹಂಕಾರದಿಂದ ಶಬ್ದವನ್ನು ತಿಳಿಯುವ ಶ್ರೋತ್ರವೂ ಸ್ಪರ್ಶವನ್ನು ತಿಳಿಯುವ ಚರ್ಮವೂ ರೂಪವನ್ನು ತಿಳಿಯುವ ಕಣ್ಣೂ ರಸವನ್ನು ತಿಳಿಯುವ ನಾಲಗೆಯೂ ಗಂಧವನ್ನು ತಿಳಿಯುವ ಘ್ರಾಣವೂ ಎಂಬ ಜ್ಞಾನೇಂದ್ರಿಯಗಳು ಐದು, ಮತ್ತೆ ನುಡಿವ ಮಾತೂ ಕುಡುವ ಕೈಯೂ ನಡೆವ ಕಾಲೂ ಶರೀರಧರ್ಮಗಳನ್ನು ನಡಸುವ ಪಾಯುಗುಹ್ಯೇಂದ್ರಿಯಗಳು ಎಂಬ ಕರ್ಮೇಂದ್ರಿಯಗಳು ಐದು, ಮತ್ತೆ ಜ್ಞಾನೇಂದ್ರಿಯ ಕರ್ಮೇಂದ್ರಿಯ ಎರಡಕ್ಕೂ ಸಹಾಯವಾದ ಮನಸ್ಸೆಂಬ ಅಂತರಿಂದ್ರಿಯವೊಂದೂ ಕೂಡಿ ಹನ್ನೊಂದು ಇಂದ್ರಿಯಗಳು ಹುಟ್ಟುವುವು. ತಾಮಸಾಹಂಕಾರದಿಂದ ಅವ್ಯಕ್ತವಾದ ಶಬ್ದಗುಣವುಳ್ಳ ಶಬ್ದತನ್ಮಾತ್ರವು ಹುಟ್ಟುವುದು. ಈ ಶಬ್ದತನ್ಮಾತ್ರದಿಂದ ಅವ್ಯಕ್ತವಾದ ಶಬ್ದಗುಣವುಳ್ಳ ಆಕಾಶ ಹುಟ್ಟುವುದು. ಈ ಆಕಾಶದೊಡನೆ ಕೂಡಿದ ಶಬ್ದತನ್ಮಾತ್ರದಿಂದ ಅವ್ಯಕ್ತವಾದ ಸ್ಪರ್ಶಗುಣವುಳ್ಳ ಸ್ಪರ್ಶತನ್ಮಾತ್ರವು ಹುಟ್ಟುವುದು. ಈ ಸ್ಪರ್ಶತನ್ಮಾತ್ರದಿಂದ ಅವ್ಯಕ್ತವಾದ ಸ್ಪರ್ಶಗುಣವುಳ್ಳ ವಾಯು ಹುಟ್ಟುವುದು. ಈ ವಾಯು ಒಡಗೂಡಿದ ಸ್ಪರ್ಶತನ್ಮಾತ್ರದಿಂದ ಅವ್ಯಕ್ತವಾದ ರೂಪಗುಣವುಳ್ಳ ರೂಪತನ್ಮಾತ್ರ ಹುಟ್ಟುವುದು. ಈ ರೂಪತನ್ಮಾತ್ರದಿಂದ ಅವ್ಯಕ್ತವಾದ ರೂಪಗುಣವುಳ್ಳ ತೇಜಸ್ಸು ಹುಟ್ಟುವುದು. ಈ ತೇಜಸ್ಸಿನೊಡಗೂಡಿದ ರೂಪತನ್ಮಾತ್ರದಿಂದ ಅವ್ಯಕ್ತವಾದ ರಸಗುಣವುಳ್ಳ ರಸತನ್ಮಾತ್ರ ಹುಟ್ಟುವುದು. ಈ ರಸತನ್ಮಾತ್ರದಿಂದ ಅವ್ಯಕ್ತವಾದ ರಸಗುಣವುಳ್ಳ ಜಲ ಹುಟ್ಟುವುದು. ಈ ಜಲದೊಡಗೂಡಿದ ರಸತನ್ಮಾತ್ರದಿಂದ ಅವ್ಯಕ್ತವಾದ ಗಂಧಗುಣವುಳ್ಳ ಗಂಧತನ್ಮಾತ್ರ ಹುಟ್ಟುವುದು. ಈ ಗಂಧತನ್ಮಾತ್ರದಿಂದ ಅವ್ಯಕ್ತವಾದ ಗಂಧಗುಣವುಳ್ಳ ಪೃಥ್ವಿ ಹುಟ್ಟುವುದು. ರಾಜಸಾಹಂಕಾರ ಎಂಬುದು ಸಾತ್ವಿಕಾಹಂಕಾರದಿಂದ ಏಕಾದಶ ಇಂದ್ರಿಯಗಳು ಹುಟ್ಟುವುದಕ್ಕೂ, ತಾಮಸಾಹಂಕಾರದಿಂದ ಪಂಚತನ್ಮಾತ್ರಗಳೂ ಪಂಚಭೂತಗಳೂ ಹುಟ್ಟುವುದಕ್ಕೂ ಸಹಾಯ

ವಾಗಿರುವುದು. ಹೀಗೆ ಪ್ರಕೃತಿ ಮಹತ್ತು ಅಹಂಕಾರಗಳೂ ಏಕಾದಶ ಇಂದ್ರಿಯಗಳೂ ಪಂಚತನ್ಮಾತ್ರಗಳೂ ಪಂಚಭೂತಗಳೂ ಎಂದು ಇಪ್ಪತ್ತನಾಲ್ಕು ತೆರನಾದ ಅಚೇತನ ಪ್ರಕೃತಿತತ್ತ್ವಕ್ಕೂ ಚೇತನವಾದ ಜೀವತತ್ತ್ವಕ್ಕೂ ಹಿರಿಯನಾದುದರಿಂದ ನೀನೇ ಪರತತ್ತ್ವವೆಂದು ಹಿರಿಯರಿಂದ ಕೇಳಿ, ನಿನ್ನನ್ನೇ ನೆರೆನಂಬಿದ ನನ್ನನ್ನು, ದಯಾಮೃತದಲ್ಲಿ ನನೆದು ತಂಪುಪಡೆದ ನಿನ್ನ ಕಡೆಗಣ್ ಬೆಳಗನ್ನು ನನ್ನಲ್ಲಿ ಸುಳಿಸಿ, ನನ್ನ ರಜಸ್ ತಮೋಗುಣಗಳೆಂಬ ಕಳೆಯನ್ನು ಕಳೆದು ಸತ್ತ್ವಗುಣವನ್ನು ಹೆಚ್ಚಿಸುವುದು, ಹೆಚ್ಚಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲ ವಲ್ಲಭಾ!

## ಹದಿಮೂರನೆಯ ಬಿನ್ನಹ

*ಹಲವು ಅಜಾಂಡಗಳನ್ನು ನೀನು ನೀರಿನ ಗುಳ್ಳೆಯಂತೆ ತೋರಿಸುವೆ ಎಂದು ಸಂಗ್ರಾಮರಾಮನು ಜಲರುಹನಾಭನ ಮೆಲ್ಲಡಿಗೆ ಒಲವಿಂದ ಒಳ್‌ಬಿನ್ನಹವನ್ನು ಒರೆದನು.*

ಅನೇಕ ಕೋಟಿ ಬ್ರಹ್ಮಾಂಡನಾಯಕಾ! ನೀನು ಜೀವರಲ್ಲಿ ದಯೆ ಮಾಡಿ, ಅವರಿಗೆ ಕರಣಕಳೇಬರ ಮೊದಲಾದುವನ್ನು ಕೊಡಬಯಸಿ, ಆ ಶರೀರದಿಂದ ಅವರು ಕರ್ಮಗಳನ್ನು ಮಾಡಲೂ ಆ ಕರ್ಮಫಲಗಳನ್ನು ಅನುಭವಿಸಲೂ ಸ್ಥಾನವಾದ ಬ್ರಹ್ಮಾಂಡವನ್ನು ಮಾಡಿದೆ. ಅದು ಹೇಗೆಂದರೆ—ಮೊದಲು ನೀನು ಸೃಜಿಸಿದ ಪಂಚಮಹಾಭೂತಗಳೂ ಒಂದರಲ್ಲಿ ಒಂದೂ ಬೆರಸದೆ ಬೇರೆ ಬೇರೆಯಾಗಿರುವುದರಿಂದ ಒಂದು ಕಾರ್ಯಕ್ಕೂ ಬಾರದಿರುವುದನ್ನು ಕಂಡು, ಅವೆಲ್ಲವನ್ನೂ ಪಂಚೀಕರಣ ಪ್ರಕಾರದಿಂದ ಒಂದುಗೂಡಿಡೆ. ಪಂಚೀಕರಣ ಎಂದರೆ—ಪಂಚಮಹಾ ಭೂತಗಳಲ್ಲಿ ಒಂದು ಮಹಾಭೂತದ ಅಂಶದ ಅರ್ಧವೂ ಮಿಕ್ಕ ನಾಲ್ಕೂ ಮಹಾಭೂತಗಳ ನಾಲ್ಕಂಶವೂ ಅರ್ಧವಾಗಿ ಕೂಡಿಸಲು, ಒಂದು ವಸ್ತು ಎನ್ನಿಸುವುದು. ಅದರಲ್ಲಿ, ಆಕಾಶ ಅರ್ಧವೂ ವಾಯು ತೇಜೋಜಲ ಪೃಥ್ವಿಗಳ ಅಷ್ಟಮಾಂಶಗಳೂ ಅರ್ಧವಾಗಿ, ಈ ಎರಡು ಅರ್ಧಗಳನ್ನು ಒಂದುಗೂಡಿಸಿದರೆ, ಇದು ಪಂಚೀಕೃತ ಆಕಾಶ ಎನ್ನಿಸುವುದು. ಮತ್ತೆ

ವಾಯುವಿನ ಅಂಶ ಅರ್ಧವೂ ಮಿಕ್ಕ ನಾಲ್ಕೂ ಭೂತಗಳ ಅಷ್ಟಮಾಂಶಗಳು ನಾಲ್ಕೂ ಕೂಡಿ, ಪಂಚೀಕೃತ ವಾಯು ಎನ್ನಿಸುವುದು. ಮತ್ತೆ ತೇಜಸ್ಸಿನ ಅಂಶ ಅರ್ಧವೂ ಮಿಕ್ಕ ನಾಲ್ಕೂ ಭೂತಗಳ ಅಷ್ಟಮಾಂಶಗಳು ನಾಲ್ಕೂ ಕೂಡಿ ತೇಜಸ್ ಎನ್ನಿಸುವುದು. ಮತ್ತೆ, ಜಲಾಂಶ ಅರ್ಧವೂ ಮಿಕ್ಕ ನಾಲ್ಕೂ ಭೂತಗಳ ಅಷ್ಟಮಾಂಶಗಳು ನಾಲ್ಕೂ ಕೂಡಿ ಜಲ ಎನ್ನಿಸುವುದು. ಮತ್ತೆ ಪೃಥ್ವೀ ಅಂಶದ ಅರ್ಧವೂ ಮಿಕ್ಕ ಭೂತಗಳ ಅಷ್ಟಮಾಂಶಗಳು ನಾಲ್ಕೂ ಕೂಡಿ ಪೃಥ್ವೀ ಎನ್ನಿಸುವುದು. ಹೀಗೆ ಪಂಚೀಕೃತವಾದ ಮಹಾಭೂತಗಳು ಒಂದರಲ್ಲಿ ಮಿಕ್ಕ ನಾಲ್ಕೂ ಭೂತಗಳು ಬೆರೆತಿದ್ದರೂ ಒಂದು ಭೂತದ ಅಂಶದ ಅರ್ಧವೂ ಮಿಕ್ಕ ಭೂತಗಳ ಅಷ್ಟಮಾಂಶವೂ ಆಗಿ, ಹೆಚ್ಚು ಕುಂದಾಗಿ, ಐದು ರಾಶಿಗಳಿರುವುದರಿಂದ, ಯಾವ ರಾಶಿಯಲ್ಲಿ ಯಾವ ಭೂತಾಂಶ ಅಧಿಕವಾಗಿರುವುದೋ ಆ ರಾಶಿಗೆ ಆ ಭೂತದ ಹೆಸರಾಗುವುದು. ಹೀಗಿರುವ ಪಂಚ ಮಹಾಭೂತಗಳೂ ಮಹತ್ ಅಹಂಕಾರತತ್ತ್ವಗಳೂ ಕೂಡಿ ಏಳೂ ವಸ್ತುಗಳಿಂದ ಬ್ರಹ್ಮಾಂಡವನ್ನು ಉಂಟುಮಾಡುವಲ್ಲಿ, ಮಡಕೆ ಮಾಡುವ ಕುಂಬಾರ ಮೊದಲಾದವರ ಹಾಗೆ ಶರೀರದ ಆಯಾಸವಿಲ್ಲದೆ ನೀರಲ್ಲಿ ಗುಳ್ಳೆಯನ್ನು ಹೊಮ್ಮಿಸುವಂತೆ ನಿನ್ನ ಇಚ್ಛಾಮಾತ್ರದಿಂದ ಹೊಮ್ಮಿಸಿದೆ. ಆ ಬಳಿಕ, ಬ್ರಹ್ಮಾಂಡದಲ್ಲಿ ಹುಟ್ಟಿಸುವ ದೇವಮನುಷ್ಯ ತಿರ್ಯಕ್ ಸ್ಥಾವರ ಸೃಷ್ಟಿಗಳನ್ನು ಆಳಿಟ್ಟು ಗೈಸುವೆನೆಂದು ನಾಲ್ಮೊಗನನ್ನು ಪಡೆದೆ. ಹೀಗೆ ನೀನೇ ಮಾಡುವ ತತ್ತ್ವಸೃಷ್ಟಿಯೂ ಅಂಡಸೃಷ್ಟಿಯೂ ಸಮಷ್ಟಿಸೃಷ್ಟಿಯೆನ್ನಿಸುವುದು. ಅನಂತರ ಚತುರ್ಮುಖನಿಂದ ಮಾಡಿಸುವ ದೇವಾದಿ ಸೃಷ್ಟಿ ವ್ಯಷ್ಟಿಸೃಷ್ಟಿ ಎನ್ನಿಸುವುದು. ಈ ಹೇಳುವ ಬ್ರಹ್ಮಾಂಡದ ಹಾಗೆ ಹಲವು ಬ್ರಹ್ಮಾಂಡಗಳನ್ನು ನೀನೊಬ್ಬನೇ ಸೃಷ್ಟಿಸಿ ಆಳಿಟ್ಟು ಕಾರ್ಯ ಕೊಳ್ಳುವುದರಿಂದ ಅನೇಕಕೋಟಿಬ್ರಹ್ಮಾಂಡನಾಯಕ ಎನ್ನಿಸುವೆ. ಈ ಜಗದ್ವ್ಯಾಪಾರ ವ್ಯಸಂಗದಲ್ಲಿ ನನ್ನನ್ನು ಮರೆಯದೆ, ನಿನ್ನ ದಯಾರ್ದ್ರಚಿತ್ತದಿಂದ ನೆನೆವುದು, ನೆನೆವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಹದಿನಾಲ್ಕನೆಯ ಬಿನ್ನಹ

*ಅಷ್ಟು ಕರ್ಮಫಲಗಳನ್ನು ಅನುಭವಿಸುವ ಸ್ಥಾನವಾದ ಭುವನಗಳನ್ನು ನೀನು ಅನುಗೊಳಿಸುವೆ—ಎಂದು ಗಂಡರಗಂಡನು ಆ ದನುಜಾರಿಗೆ ಒಲಿದು ಹೇಳಿದನು.*

ಸಕಲಭುವನಾಧಾರಾ! ಭುವನಗಳು ಹದಿನಾಲ್ಕು. ಅವೆಲ್ಲವೂ ಬ್ರಹ್ಮಾಂಡದಲ್ಲಿ ಇರುವುವು. ಅದು ಹೇಗೆಂದರೆ—ಬ್ರಹ್ಮಾಂಡವೆಂಬುದು ಭರಣಿಯ ಹಾಗೆ ವೃತ್ತವಾಗಿರುವುದು. ಅದರೊಳಗಿನ ಇಂಬು ಯಾವ ದಿಕ್ಕಿನಲ್ಲೂ ಐವತ್ತು ಕೋಟಿ ಯೋಜನದ ಅಳತೆಯಾಗಿರುವುದು. ಅದರಲ್ಲಿ ಕೆಳಗಿನಿಂದ ಅಂಡಭಿತ್ತಿಯನ್ನು ಹಿಡಿದು ಮೇಲಕ್ಕೆ ಗರ್ಭೋದಕವಿರುವ ತಾವು ಎಂಬತ್ತಮೂರು ಲಕ್ಷದ ಐವತ್ತು ಸಾವಿರ ಯೋಜನವಾಗಿರುವುದು. ಅದಕ್ಕೆ ಮೇಲೆ ಬಯಲಾಗಿರುವ ತಾವು ಇಪ್ಪತ್ತುನಾಲ್ಕು ಕೋಟಿಯೂ ಹದಿನಾಲ್ಕು ಲಕ್ಷವೂ ನಾಲ್ವತ್ತೆಂಟು ಸಾವಿರ ಯೋಜನವಾಗಿರುವುದು. ಅಲ್ಲಿ ದಕ್ಷಿಣ ಭಾಗದಲ್ಲಿ ರೌರವ ಮೊದಲಾದ ನರಕಗಳು ಆಗಿರುವುದು. ಅದಕ್ಕೆ ಮೇಲೆ ಶೇಷಲೋಕ ಎಂಬುದು ಮೂವತ್ತೆರಡು ಸಾವಿರ ಯೋಜನವಾಗಿರುವುದು. ಅದಕ್ಕೆ ಮೇಲೆ ಭೂಮಿ ಎಪ್ಪತ್ತು ಸಾವಿರ ಯೋಜನದೊಳಗೆ ಒಂದೊಂದು ಹತ್ತು ಸಾವಿರ ಯೋಜನವಾಗಿ ಮೇಲ್ಮನೆಯ ಮರ್ಯಾದೆಯಲ್ಲಿ ಪಾತಾಳ ಮೊದಲಾಗಿ ಸಪ್ತಲೋಕಗಳು ಆಗಿರುವುದು. ಭೂಮಿಗೆ ಮೇಲೆ ಸೂರ್ಯಮಂಡಲ ಪರ್ಯಂತ ಒಂದು ಲಕ್ಷ ಯೋಜನವಾಗಿರುವುದು. ಹಾಗೆ ಕೆಳಗಿನ ಅಂಡದ ಭಿತ್ತಿ ಹಿಡಿದು ಸೂರ್ಯಮಂಡಲ ಪರ್ಯಂತಕ್ಕೆ ಇಪ್ಪತ್ತೈದು ಕೋಟಿ ಯೋಜನವಾಗಿರುವುದು. ಅದಕ್ಕೆ ಮೇಲೆ ಚಂದ್ರಮಂಡಲ ಒಂದು ಲಕ್ಷ ಯೋಜನದಲ್ಲಿಯೂ ಅದಕ್ಕೆ ಮೇಲೆ ನಕ್ಷತ್ರಮಂಡಲ ಒಂದು ಲಕ್ಷ ಯೋಜನದಲ್ಲಿಯೂ ಇರುವುದು. ಅದಕ್ಕೆ ಮೇಲೆ ಎರಡು ಲಕ್ಷ ಯೋಜನದಲ್ಲಿ ಬುಧನೂ, ಅದಕ್ಕೆ ಮೇಲೆ ಎರಡು ಲಕ್ಷ ಯೋಜನದಲ್ಲಿ ಶುಕ್ರನೂ, ಅದಕ್ಕೆ ಮೇಲೆ ಎರಡು ಲಕ್ಷ ಯೋಜನದಲ್ಲಿ ಮಂಗಳನೂ, ಅದಕ್ಕೆ ಮೇಲೆ ಎರಡು ಲಕ್ಷ ಯೋಜನದಲ್ಲಿ ಬೃಹಸ್ಪತಿಯೂ, ಅದಕ್ಕೆ ಮೇಲೆ ಎರಡು ಲಕ್ಷ ಯೋಜನದಲ್ಲಿ ಸಪ್ತರ್ಷಿಮಂಡಲವೂ, ಅದಕ್ಕೆ ಮೇಲೆ ಒಂದು ಲಕ್ಷ ಯೋಜನದಲ್ಲಿ ಜ್ಯೋತಿಶ್ಚಕ್ರಕೂಟಸ್ಥನಾದ ಧ್ರುವನೂ ಇರುವುದು.

ಹಾಗೆ ಸೂರ್ಯಮಂಡಲದಿಂದ ಧ್ರುವಮಂಡಲ ಪರ್ಯಂತ ಹದಿನಾಲ್ಕು ಲಕ್ಷ ಯೋಜನವೂ ಸುವರ್‌ಲೋಕ ಎನ್ನಿಸಿ, ಇಂದ್ರಾದಿ ದೇವತೆಗಳ ಸ್ಥಾನವಾಗಿರುವುದು. ಅದಕ್ಕೆ ಮೇಲೆ ಒಂದು ಕೋಟಿ ಯೋಜನವೂ ಮಹರ್‌ಲೋಕ ಎನ್ನಿಸಿ, ಮೊದಲು ಇಂದ್ರಾದಿ ಪದವಿಯಲ್ಲಿದ್ದು ಪಟ್ಟವನ್ನು ತೆಗೆದ ದೇವತೆಗಳ ಸ್ಥಾನವಾಗಿರುವುದು. ಅದಕ್ಕೆ ಮೇಲೆ ಎರಡು ಕೋಟಿ ಯೋಜನವೂ ಜನೋಲೋಕ ಎನ್ನಿಸಿ, ಬ್ರಹ್ಮಪುತ್ರರಾದ ಸನಕಾದಿ ಮುನಿಗಳ ಸ್ಥಾನವಾಗಿರುವುದು. ಅದಕ್ಕೆ ಮೇಲೆ ಎಂಟು ಕೋಟಿ ಯೋಜನವೂ ತಪೋಲೋಕ ಎನ್ನಿಸಿ, ಓಂಕಾರ ಮೊದಲಾದ ಪರಮ ಋಷಿಗಳ ಸ್ಥಾನವಾಗಿರುವುದು. ಅದಕ್ಕೆ ಮೇಲೆ ಹನ್ನೆರಡು ಕೋಟಿ ಯೋಜನವೂ ಸತ್ಯಲೋಕ ಎನ್ನಿಸಿ, ಚತುರ್ಮುಖ ಬ್ರಹ್ಮನ ಸ್ಥಾನವಾಗಿರುವುದು. ಅದಕ್ಕೆ ಮೇಲೆ ಒಂದು ಕೋಟಿಯೂ ಎಂಬತ್ತಾರು ಲಕ್ಷ ಯೋಜನವೂ ಬಯಲಾಗಿರುವುದು. ಹಾಗೆ ಸೂರ್ಯಮಂಡಲದಿಂದ ಮೇಗಿನ ಅಂಡಭಿತ್ತಿಪರ್ಯಂತಕ್ಕೆ ಇಪ್ಪತ್ತೈದು ಕೋಟಿಯೂ ಕೆಳಗಿನ ಅಂಡಭಿತ್ತಿಪರ್ಯಂತಕ್ಕೆ ಇಪ್ಪತ್ತೈದು ಕೋಟಿ ಯೋಜನವೂ ಆಗಿ, ಬ್ರಹ್ಮಾಂಡವು ಐವತ್ತು ಕೋಟಿ ಯೋಜನ ಉದ್ದವಾಗಿರುವುದು. ಇದರಲ್ಲಿ ನೆಲೆಯುಪ್ಪರಿಗೆಯಂತೆ ಹದಿನಾಲ್ಕು ಭುವನಗಳಲ್ಲಿರುವ ಸಕಲ ಪ್ರಾಣಿಗಳ ಸ್ವರೂಪ ಸ್ಥಿತಿ ಪ್ರವೃತ್ತಿಗಳಿಗೆ ನೀನೇ ಕಾರಣವಾಗಿರುವುದರಿಂದ ಸಕಲಭುವನಾಧಾರ ಎನ್ನಿಸುವೆ. ಅದರಿಂದ ನನ್ನ ಸ್ವರೂಪ ರೂಪ ಸ್ಥಿತಿಗಳು ನಿನ್ನ ಅಧೀನವಾಗಿರುವುದೆಂದು ಹಿರಿಯರಿಂದ ಕೇಳಿ, ನನ್ನ ಹಿತಾಹಿತದಲ್ಲಿ ನಾನು ಕೈತೆಗೆದಿರುವೆನು. ನನ್ನನ್ನು ಸಲಹುವ ಸಯ್ಪು ನಿನ್ನದು, ನಿನ್ನದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಹದಿನೈದನೆಯ ಬಿನ್ನಹ

ಸಮುದ್ರ ಬೆಟ್ಟ ಹೊಳೆಗಳಿಂದ ತುಂಬಿದ ಭೂವಲಯವಷ್ಟನ್ನೂ ನೀನು ಸಮೆದೆ ಎಂಬುದು ನಿರ್ಣೀತ—ಎಂದು, ಕರ್ಣಾಟಕ ಚಕ್ರವರ್ತಿಯು ಶೌರಿಗೆ ಬಿನ್ನಹಗೈದನು.

ಅಖಂಡ ಭೂಮಂಡಲಾಧೀಶ್ವರಾ! ಭೂಮಿಯನ್ನು ಬಳಸಿ ಅಂಡ ಭಿತ್ತಿ ವೃತ್ತವಾಗಿರುವುದರಿಂದ ಯಾವ ನಿಟ್ಟಿನಲ್ಲೂ ಐವತ್ತು ಕೋಟಿ

ಯೋಜನವಾಗಿರುವುದು. ಅದು ಹೇಗೆಂದರೆ—ಭೂಮಧ್ಯದಲ್ಲಿ ಜಂಬೂದ್ವೀಪವು ವೃತ್ತವಾಗಿ ಯಾವ ನಿಟ್ಟಿನಲ್ಲೂ ಲಕ್ಷ ಯೋಜನಪ್ರಮಾಣವಾಗಿರುವುದು. ಈ ಜಂಬೂದ್ವೀಪಮಧ್ಯದಲ್ಲಿ ಮಹಾಮೇರು ಸುವರ್ಣಮಯವಾಗಿ, ಕೆಳಗೆ ಹದಿನಾರು ಸಾವಿರ ಯೋಜನದ ಅಗಲವೂ ತಲೆಯ ಮೇಲೆ ಮೂವತ್ತೆರಡು ಸಾವಿರ ಯೋಜನದ ಅಗಲವೂ ಆಗಿ ಚತುರಸ್ರವಾಗಿ ಬೆಲ್ಲವನ್ನು ತಲೆಕೆಳಕಾಗಿ ಇರಿಸಿದಂತೆ ಇರುವುದು. ಈ ಜಂಬೂದ್ವೀಪವನ್ನು ಬಳಸಿದ ಲವಣಸಮುದ್ರ ಒಂದು ಲಕ್ಷ ಯೋಜನದ ಅಗಲವೂ, ಇದನ್ನು ಬಳಸಿದ ಪ್ಲಕ್ಷದ್ವೀಪ ಎರಡು ಲಕ್ಷ ಯೋಜನದ ಅಗಲವೂ ಇದನ್ನು ಬಳಸಿದ ಇಕ್ಷುಸಮುದ್ರವು ಎರಡು ಲಕ್ಷ ಯೋಜನವೂ, ಇದನ್ನು ಬಳಸಿದ ಶಾಲ್ಮಲಿದ್ವೀಪವು ನಾಲ್ಕು ಲಕ್ಷ ಯೋಜನವೂ, ಇದನ್ನು ಬಳಸಿದ ಸುರಾಸಮುದ್ರವು ನಾಲ್ಕು ಲಕ್ಷ ಯೋಜನವೂ, ಇದನ್ನು ಬಳಸಿದ ಕುಶದ್ವೀಪವು ಎಂಟು ಲಕ್ಷ ಯೋಜನವೂ, ಇದನ್ನು ಬಳಸಿದ ಘೃತಸಮುದ್ರವು ಎಂಟು ಲಕ್ಷ ಯೋಜನವೂ, ಇದನ್ನು ಬಳಸಿದ ಕ್ರೌಂಚದ್ವೀಪವು ಹದಿನಾರು ಲಕ್ಷ ಯೋಜನವೂ, ಇದನ್ನು ಬಳಸಿದ ದಧಿಸಮುದ್ರವು ಹದಿನಾರು ಲಕ್ಷ ಯೋಜನವೂ, ಇದನ್ನು ಬಳಸಿದ ಶಾಕದ್ವೀಪವು ಮೂವತ್ತೆರಡು ಲಕ್ಷ ಯೋಜನವೂ, ಇದನ್ನು ಬಳಸಿದ ಕ್ಷೀರ ಸಮುದ್ರವು ಮೂವತ್ತೆರಡು ಲಕ್ಷ ಯೋಜನವೂ, ಇದನ್ನು ಬಳಸಿದ ಪುಷ್ಕರದ್ವೀಪವು ಅರುವತ್ತುನಾಲ್ಕು ಲಕ್ಷ ಯೋಜನವೂ, ಇದನ್ನು ಬಳಸಿದ ಸ್ವಾದೂದಕ ಸಮುದ್ರವು ಅರುವತ್ತುನಾಲ್ಕು ಲಕ್ಷ ಯೋಜನವೂ ಆಗಿರುವುದು. ಈ ಪರ್ಯಂತವೂ ಮನುಷ್ಯಾದಿ ಪ್ರಾಣಿಗಳ ಸಂಚಾರಕ್ಕೆ ಯೋಗ್ಯವಾಗಿರುವುದು. ಇದರ ಹೊರವಲಯವು ಪ್ರಾಣಿ ಸಂಚಾರಕ್ಕೆ ಯೋಗ್ಯವಲ್ಲದೆ, ಕನ್ನಡಿಯಂತೆ ನಿರ್ಮಲವಾಗಿ ಸುವರ್ಣಮಯವಾಗಿರುವ ಭೂಮಿ ಹತ್ತು ಕೋಟಿಯೂ ಹದಿನಾಲ್ಕು ಲಕ್ಷ ಯೋಜನದ ಅಗಲವಾಗಿರುವುದು. ಇದನ್ನು ಬಳಸಿದ ಲೋಕಾಲೋಕ ಪರ್ವತವು ಹತ್ತು ಸಾವಿರ ಯೋಜನ ಉದ್ದವೂ ಹತ್ತು ಸಾವಿರ ಯೋಜನದ ಅಗಲವೂ ಆಗಿರುವುದು. ಇದನ್ನು ಬಳಸಿದ ಅಂಧಕಾರ ಭೂಮಿ ಅಂಡಕಟಾಹ ಪರ್ಯಂತಕ್ಕೆ ಹನ್ನೆರಡು ಕೋಟಿಯೂ

ಮೂವತ್ತೆರಡು ಲಕ್ಷವೂ ನಾಲ್ವತ್ತು ಸಾವಿರ ಯೋಜನದ ಅಗಲವೂ ಆಗಿರುವುದು. ಹೀಗೆ ಭೂಮಧ್ಯದಿಂದ ಒಂದು ದಿಕ್ಕಿನ ಅಂಡಭಿತ್ತಿಪರ್ಯಂತಕ್ಕೆ ಇಪ್ಪತ್ತೈದು ಕೋಟಿ ಯೋಜನ ವಿಸ್ತಾರವಾಗಿರುವುದು. ಅದು ಹೇಗೆಂದರೆ—ಜಂಬೂದ್ವೀಪ ಮಧ್ಯದಿಂದ ಲವಣ ಸಮುದ್ರಪರ್ಯಂತಕ್ಕೆ ಐವತ್ತು ಸಾವಿರ ಯೋಜನವೂ, ಮಿಕ್ಕ ಆರು ದ್ವೀಪಗಳೂ ಏಳು ಸಮುದ್ರಗಳೂ ಕೂಡಿ ಎರಡು ಕೋಟಿಯೂ ಐವತ್ತುಮೂರು ಲಕ್ಷ ಯೋಜನವೂ, ಸುವರ್ಣಭೂಮಿ ಹತ್ತು ಕೋಟಿಯೂ ಹದಿನಾಲ್ಕು ಲಕ್ಷ ಯೋಜನವೂ, ಲೋಕಾಲೋಕ ಪರ್ವತವು ಹತ್ತು ಸಾವಿರ ಯೋಜನವೂ, ಅಂಧಕಾರಭೂಮಿ ಹನ್ನೆರಡು ಕೋಟಿಯೂ ಮೂವತ್ತೆರಡು ಲಕ್ಷವೂ ನಾಲ್ವತ್ತುಸಾವಿರ ಯೋಜನವೂ ಕೂಡಿ ಇಪ್ಪತ್ತೈದು ಕೋಟಿ ಯೋಜನವಾಗಿರುವುದು. ಹೀಗೆ ಮೇರುಮಧ್ಯದಿಂದ ಒಂದು ನಿಟ್ಟಿ ಇಪ್ಪತ್ತೈದು ಕೋಟಿ ಯೋಜನ ವಿಸ್ತಾರವಾಗಿರುವುದರಿಂದ ಭೂಮಂಡಲವು ಇತ್ತಣ ಅಂಡಭಿತ್ತಿಯಿಂದ ಅತ್ತಣ ಅಂಡಭಿತ್ತಿ ಪರ್ಯಂತಕ್ಕೆ ಐವತ್ತು ಕೋಟಿ ಯೋಜನ ವಿಸ್ತಾರವಾಗಿರುವುದು. ಇಂತಹ ಭೂಮಂಡಲವು ಪ್ರಳಯಾಂಬುಧಿಯಲ್ಲಿ ಮುಳುಗಿದ ಅಂದು ನೀನು ಹೊತ್ತು ಹೊರೆದುದರಿಂದ ಅಖಂಡಭೂಮಂಡಲಾಧೀಶ್ವರ ಎನ್ನಿಸುವೆ. ನಿನ್ನ ಐಶ್ವರ್ಯವನ್ನು ಕಡೆಗಾಣುವುದು ಅಂಬುಜಸಂಭವಾದಿಗಳಿಗೂ ಅಸಾಧ್ಯವಾದರೂ ಮರುಕದಿಂದ ನಾನು ನನ್ನ ವಿಜ್ಞಾನವನ್ನು ಇದ್ದಷ್ಟು ಬಿನ್ನವಿಸುವೆನು. ಇದನ್ನು ಮನ್ನಿಸುವುದು, ಮನ್ನಿಸುವುದು, ಅನನ್ಯಜನ ಸುಲಭ, ಶ್ರೀ ಯದುಶೈಲವಲ್ಲಭಾ!

## ಹದಿನಾರನೆಯ ಬಿನ್ನಹ

ಮೇದಿನಿಯಲ್ಲಿ ಎಸೆಯುವ ಸ್ವರ್ಗದ ಭೇದಗಳನ್ನು ನೀನು ಉಂಟುಮಾಡಿದೆ—ಎಂದು ಆ ಕೈದು ಹಿಡಿದವರ ಒಳ್ಗಂಡನು ಯಾದವಗಿರಿನಾಥನ ಅಡಿಗೆ ಬಿನ್ನಹ ಮಾಡಿದನು.

ನಿಖಿಲಭೋಗಪ್ರದಾ! ಭೋಗ ಎಂಬುದು ಸುಖದುಃಖಗಳ ಅನುಭವ. ದುಃಖವನ್ನು ಅನುಭವಿಸುವ ದೇಶ ನರಕವೆನ್ನಿಸುತ್ತದೆ;

ಸುಖವನ್ನು ಅನುಭವಿಸುವ ದೇಶ ಸ್ವರ್ಗವೆನಿಸುತ್ತದೆ. ಈ ಸುಖಾನುಭವ ವಾದ ಸ್ವರ್ಗಗಳು ಹದಿನಾಲ್ಕು ಲೋಕಗಳಲ್ಲೂ ಇವೆ. ಅವುಗಳಲ್ಲಿ ಭೂಮಿ ಯಲ್ಲಿರುವ ಸ್ವರ್ಗಗಳು ಭೂಸ್ವರ್ಗಗಳು ಎನ್ನಿಸುವುವು. ಅವು ಯಾವು ವೆಂದರೆ: ಜಂಬೂದ್ವೀಪದ ನವವರ್ಷಗಳಲ್ಲಿ ಭಾರತವರ್ಷವೊಂದನ್ನು ಬಿಟ್ಟು, ಮಿಕ್ಕ ಎಂಟು ವರ್ಷಗಳೂ, ವರ್ಷಪರ್ವತಗಳೂ, ಮಹಾ ಮೇರುವೂ, ಪ್ಲಕ್ಷ ಶಾಲ್ಮಲಿ ಕುಶ ಕ್ರೌಂಚ ಶಾಕ ಎಂಬ ಐದೂ ದ್ವೀಪ ಗಳಲ್ಲಿರುವ ಮೂವತ್ತೈದು ವರ್ಷಗಳೂ, ಅಷ್ಟು ವರ್ಷಪರ್ವತಗಳೂ, ಪುಷ್ಕರದ್ವೀಪದಲ್ಲಿರುವ ಎರಡು ವರ್ಷಗಳೂ, ವರ್ಷಪರ್ವತವೊಂದೂ— ಇಷ್ಟು ಭೂಸ್ವರ್ಗಗಳು ಎನಿಸುವುವು. ಇವುಗಳಲ್ಲಿ ಜಂಬೂದ್ವೀಪದಲ್ಲಿ ರುವ ಎಂಟೂ ವರ್ಷಗಳಲ್ಲೂ, ಪುಷ್ಕರದ್ವೀಪದಲ್ಲಿರುವ ಎರಡು ವರ್ಷ ಗಳಲ್ಲೂ, ಮನುಷ್ಯರೆಲ್ಲರಿಗೆ ಹತ್ತುಸಾವಿರ ವರುಷದ ಆಯುಸ್ಸುಂಟಾ ಗಿರುವುದು; ರೋಗವೂ ಈರ್ಷ್ಯಾ ಅಸೂಯಾದಿಗಳು ಒಂದೂ ಇಲ್ಲ ದಿರುವುದು; ಎಲ್ಲರೂ ಉತ್ತಮ ಜಾತಿಯಾಗಿರುವುದರಿಂದ ಜಾತಿಯಲ್ಲಿ ಹೆಚ್ಚುಕಡಿಮೆಗಳು ಇಲ್ಲದಿರುವುದು: ಜಾತಿಭೇದವಿಲ್ಲದುದರಿಂದ ಆಚಾರ ಭೇದವಿಲ್ಲದಿರುವುದು. ಇಲ್ಲಿರುವ ಮನುಷ್ಯರೆಲ್ಲರೂ ಯಾವಾಗಲೂ ಹಸಿವೂ ದಾಹವೂ ಇಲ್ಲದೆ, ಪರಮಸಂತುಷ್ಟರಾಗಿ ದೇವತೆಗಳೂ ತಾವೂ ಸಮಾನವೇಷವೂ ಸಮಾನಬುದ್ಧಿಯೂ ಸಮಾನಶಕ್ತಿಯೂ ಆಗಿರುವರು. ಪ್ಲಕ್ಷ ಶಾಲ್ಮಲಿ ಕುಶ ಕ್ರೌಂಚ ಶಾಕದ್ವೀಪಗಳಲ್ಲಿರುವ ಮೂವತ್ತೈದು ವರ್ಷಗಳಲ್ಲೂ, ವರ್ಷಪರ್ವತಗಳಲ್ಲೂ, ಕಾಲ ಯಾವಾಗಲೂ ತ್ರೇತಾ ಯುಗಕ್ಕೆ ಸಮವಾಗಿಯೇ ಇರುವುದು. ಇಲ್ಲಿಯ ಮನುಷ್ಯರೂ ದೇವ ಗಂಧರ್ವರೂ ಒಡನಾಡುತ್ತ, ಐದು ಸಾವಿರ ವರ್ಷದ ಆಯುಸ್ಸುಂಟಾಗಿ, ಆಧಿವ್ಯಾಧಿಗಳೊಂದೂ ಇಲ್ಲದೆ ಸುಖವಾಗಿರುವರು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರೆಂಬ ಶುದ್ಧ ಜಾತಿಯವರಾಗಿ ಸದಾಚಾರಸಂಪನ್ನರಾಗಿ ರುವರಲ್ಲದೆ ಒಬ್ಬರೂ ಸಂಕರಜಾತಿಯವರಲ್ಲದೆ ಇರುವರು ಇವರಲ್ಲಿಯೂ ಇಳಾವೃತವರ್ಷದಲ್ಲಿ ಹಲವು ಭೋಗಗಳಿಗಾಸ್ಪದವಾಗಿ ಹಲವು ರಮ ಣೀಯವಾದ ಸ್ಥಾನಗಳು ಇರುವುವು. ಅವು ಯಾವುವೆಂದರೆ—ಮಹಾ ಮೇರು ಚಲಿಸದಂತೆ ನಾಲ್ಕೂ ದಿಕ್ಕಿನಲ್ಲಿ ಬಲಿತ ಕೀಲುಗಳಂತೆ ನಾಲ್ಕು

ಪರ್ವತಗಳಿರುವುವು. ಅದರಲ್ಲಿ ಮೂಡದೆಸೆಯಲ್ಲಿ ಮಂದರಪರ್ವತವಿರುವುದು. ಅದರ ಮೇಲೆ ಸಾವಿರದ ನೂರು ಯೋಜನದ ಉದ್ದವಾದ ಕಡಬದ ಮರ ಇರುವುದು. ಆ ಮರಕ್ಕೆ ಸಾವಿರ ಹಿರಿಯ ಕೊಂಬೆಗಳೂ ಹತ್ತು ಸಾವಿರ ಕಿರುಕೊಂಬೆಗಳೂ ಆಗಿ ಸರ್ವಕಾಲದಲ್ಲೂ ಹೂಗಳೂ ಫಲಗಳೂ ಉಂಟಾಗಿ, ಬಳಸಿ, ಸಾವಿರ ಯೋಜನ ದಿವ್ಯಪರಿಮಳವಾಗಿರುವುದು. ಈ ಪರ್ವತದ ಒತ್ತಿನಲ್ಲಿ ಮೂಡಲಾಗಿ ಚೈತ್ರರಥವೆಂಬ ಶೃಂಗಾರ ತೋಟವೂ, ಅರುಣೋದ ಎಂಬ ಸರಸ್ಸೂ ಇರುವುದು. ಮೇರುವಿಗೆ ತೆಂಕಲಾಗಿ ಗಂಧಮಾದನವೆಂಬ ಪರ್ವತವಿರುವುದು. ಅದರ ಮೇಲೆ ಸಾವಿರದ ನೂರು ಯೋಜನದ ಉದ್ದವಾದ ನೇರಿಲೆ ಮರವಿರುವುದು. ಇದರ ಕೊಂಬೆಗಳಿಂದ ಸ್ವಾದುವಾಗಿ ಮೃದುವಾಗಿ ಸುಗಂಧಯುಕ್ತವಾಗಿ ಮಹಾಗಜಪ್ರಮಾಣವಾಗಿರುವ ಹಣ್ಣುಗಳು ಹಾಸರೆಯಲ್ಲಿ ಬಿದ್ದು ಕರಗಿ ಜಂಬೂನದಿಯೆಂಬ ಹೊಳೆಯಾಗಿ ಮೇರುವನ್ನು ಬಳಸಿ ಹೊನಲು ಹರಿಯುತ್ತಿರುವುದು. ಅದರ ದಡದ ಮಣ್ಣುಗಳು ಆ ರಸದಿಂದ ನನೆದುದರಿಂದ ಜಾಂಬೂನದ ಸ್ವರ್ಣವಾಗಿ ದೇವಭೂಷಣಯೋಗ್ಯವಾಗಿರುವುದು. ಅದರ ತೆಂಕಣ ತಡಿಯಲ್ಲಿ ಗಂಧಮಾದನವೆಂಬ ಶೃಂಗಾರತೋಟವೂ ಮಾನಸವೆಂಬ ಸರಸ್ಸೂ ಇರುವುದು. ಮೇರುವಿಗೆ ಪಡುವಲಾಗಿ ವಿಪುಲವೆಂಬ ಪರ್ವತವಿರುವುದು. ಅದರ ಮೇಲೆ ಸಾವಿರದ ನೂರು ಯೋಜನದ ಉದ್ದವಾದ ಅರಳಿಯ ಮರವಿರುವುದು. ಅದರ ಹಣ್ಣುಗಳು ಸರ್ವಕಾಲವೂ ಮಹಾಕುಂಭ ಪ್ರಮಾಣವಾಗಿ ಪರಿಮಳಯುಕ್ತವಾಗಿರುವುದು. ಅದಕ್ಕೆ ಪಡುವಲಾಗಿ ವೈಭ್ರಾಜವೆಂಬ ಶೃಂಗಾರತೋಟವೂ ಸಿತೋದವೆಂಬ ಸರಸ್ಸೂ ಇರುವುದು. ಮೇರುವಿಗೆ ಬಡಗಲಾಗಿ ಸುಪಾರ್ಶ್ವವೆಂಬ ಪರ್ವತವಿರುವುದು. ಅದರ ಮೇಲೆ ಸಾವಿರದ ನೂರು ಯೋಜನದ ಉದ್ದವಾದ ಆಲದ ಮರವಿರುವುದು. ಅದರ ಹಣ್ಣುಗಳು ಸರ್ವಕಾಲವೂ ಮಹಾಕುಂಭ ಪ್ರಮಾಣವಾಗಿ ಪರಿಮಳಯುಕ್ತವಾಗಿರುವುದು. ಅದರ ಒತ್ತಿನಲ್ಲಿ ನಂದನವೆಂಬ ಶೃಂಗಾರತೋಟವೂ ಸಿತೋದವೆಂಬ ಸರಸ್ಸೂ ಇರುವುದು. ಈ ನಾಲ್ಕು ಪರ್ವತಗಳ ಹೊರವಲಯದಲ್ಲಿ ಹಲವು ಬೆಟ್ಟಗಳು ಇವೆ. ಇವು

ತಾವರೆಯ ಕೇಸರಗಳ ಮರ್‍ಯಾದೆಯಾಗಿರುವುದರಿಂದ ಕೇಸರಪರ್ವತಗಳು ಎನ್ನಿಸುವುವು. ಅವು ಯಾವುವೆಂದರೆ—ಮೇರುವಿಗೆ ಮೂಡಲಾಗಿ ಸಿತಾಂಭ, ಉದಕುಂಜ, ಮಾರ್ಷ, ವಿರುಂಗ, ಮಣಿಶೃಂಗ, ಸಬಿಂದು, ಮಂದರ, ವೇಣುಮಂತ, ಸಮೇಘ, ನಿಷಧ, ದೇವಪರ್ವತ, ಎಂಬೀ ಪರ್ವತಗಳಿರುವುವು. ಮೇರುವಿಗೆ ತೆಂಕಲಾಗಿ ತ್ರಿಶಿರ, ತ್ರಿಶೃಂಗ, ಕಪಿಂಗ, ಪತಂಗ, ಕುಚಕ್ರ, ತಾಮ್ರಾಭ, ವಿಶಾಲ, ಶ್ವೇತಧರ, ಸಮೂಲ, ವಸುಧಾರಾ, ರತ್ನಧಾರಾ, ಏಕಶೃಂಗ, ಮಹಾಮೂಲ, ಗಜಶೈಲ, ಪಿಶಾಚಕ, ಪಂಚಶೈಲ, ಕೈಲಾಸ, ಹಿಮವಂತ ಎಂಬೀ ಪರ್ವತಗಳಿರುವುವು. ಮೇರುವಿಗೆ ಪಡುವಲಾಗಿ ಕಪಿಲ, ಪಿಂಜಕ, ಭದ್ರ, ಸುರಸ, ಮಹಾಬಲ, ಕುಮುದ, ಮಧುಮಂತ, ಅಂಜನ, ಮಕುಟ, ಕೃಷ್ಣ, ಪಾಂಡರ, ಸಹಸ್ರಶಿಖರ, ಪಾರಿಯಾತ್ರ, ತ್ರಿಶೃಂಗ ಎಂಬ ಈ ಪರ್ವತಗಳಿರುವುವು. ಮೇರುವಿಗೆ ಬಡಗಲಾಗಿ ಶಂಖಕೂಟ, ನಿಷಧ, ಹಂಸ, ನಾಗ, ಕಪಿಂಗ, ಇಂದ್ರಶೈಲ, ನೀಲ, ಕನಕಶೃಂಗ, ಶತಶೃಂಗ, ಪುಷ್ಕರ, ಮೇಘಶೈಲ, ವಿರಜ, ಜಾರುಧಿ, ತ್ರಿಶೃಂಗ ಎಂಬ ಈ ಪರ್ವತಗಳಿರುವುವು. ಈ ಕೇಸರಪರ್ವತಗಳ ತಪ್ಪಲುಗಳಲ್ಲಿ ರಮಣೀಯವಾಗಿ, ದೇವತೆಗಳಿಗೆ ಕ್ರೀಡಾಸ್ಥಾನಗಳಾಗಿರುವುವು. ಅವು ಯಾವುವೆಂದರೆ—ಮೇರುವಿಗೆ ಮೂಡಲಾಗಿ, ಸಿತಾಂಭ ಕುಮುದಪರ್ವತಗಳ ನಡುವೆ ಮುನ್ನೂರು ಯೋಜನದ ನೀಳವೂ ನೂರು ಯೋಜನದ ಅಗಲವೂ ಆಗಿ ಸ್ವಾದುವಾಗಿ ನಿರ್ಮಲವಾಗಿದ್ದ ಜಲದಿಂದ ಪೂರ್ಣವಾದ ಶ್ರೀಸರಸ್ ಎಂಬ ಕೊಳನಿರುವುದು. ಅದರಲ್ಲಿ ಕೊಳಗದ ತೋರವಾದ ತಾವರೆಗಳಿರುವುದು. ಅದರಲ್ಲಿ ಕೋಟಿದಳಯುಕ್ತವಾಗಿ ಸ್ವರ್ಣಮಯವಾದ ಒಂದು ತಾವರೆಯಲ್ಲಿ ಸಾಕ್ಷಾತ್ ಮಹಾಲಕ್ಷ್ಮಿ ಇರುತ್ತಿರುವಳು. ಈ ಕೊಳದ ಒತ್ತಿನಲ್ಲಿ ನೂರು ಯೋಜನದ ಅಗಲವೂ ಇನ್ನೂರು ಯೋಜನದ ನೀಳವೂ ಆದ ಬಿಲ್ವಪತ್ರದ ವನವಿರುವುದು. ಅದರಲ್ಲಿ ಮರಗಳು ಯಾವಾಗಲೂ ಫಲಪುಷ್ಪಯುಕ್ತವಾಗಿ ಅರ್ಧಕೂಗುದಾರಿಯ ಉದ್ದವಾಗಿ ಇರುವುವು. ಅಲ್ಲಿಯೂ ಮಹಾಲಕ್ಷ್ಮಿ ಸಿದ್ಧಸಂಗನಿಷೇವಿತೆಯಾಗಿ ಇರುವುದರಿಂದ ಆ ವನಕ್ಕೆ ಶ್ರೀವನವೆಂಬ ಹೆಸರಾಗಿರುವುದು. ಮತ್ತೆ, ವೈಕಂಕ ಮಣಿಶೈಲ ಎಂಬ

ಈ ಪರ್ವತಗಳ ನಡುವೆ ಇನ್ನೂರು ಗಾವುದ ನೀಳವೂ ನೂರು ಗಾವುದದ ಅಗಲವೂ ಆಗಿ ನಿರ್ಮಲೋದಕವಾದ ಒಂದು ದೊಣೆಯಿರುವುದು. ಅದರ ತಡಿಯಲ್ಲಿ ಅರ್ಧ ಕೂಗುದಾರಿಯುದ್ದವಾದ ಹಲವು ಮರಗಳಿಂದ ಎಸೆಯುವ ಒಂದು ಮಹಾವನವಿರುವುದು. ಆದರ ನಡುವೆ ಕಾಶ್ಯಪ ಮುನಿಗೆ ಆಶ್ರಮವಾಗಿರುವುದು. ಮತ್ತೆ ಮಹಾನೀಲ ಕುಂಡಶೈಲಗಳ ನಡುವೆ ಪದ್ಮಷಂಡದಿಂದ ಉಪಶೋಭಿತವಾದ ಸುಖನದಿ ಎಂಬ ಕೊಳ ಇರುವುದು. ಅದರ ತಡಿಯಲ್ಲಿ ಐವತ್ತು ಯೋಜನದ ನೀಳವೂ ಮೂವತ್ತು ಯೋಜನದ ಅಗಲವೂ ಆದ ಹನೆಯ ಮರದ ವನವಿರುವುದು. ಆ ಮರಗಳು ಅರೆಕೂಗು ದಾರಿಯುದ್ದವಾಗಿರುವುವು. ದೇವ ಶೈಲವೆಂಬ ಬೆಟ್ಟದ ತಪ್ಪಲಲ್ಲಿ ಗಿಡಮರಗಳು ಒಂದೂ ಇಲ್ಲದೆ ಸಾವಿರ ಗಾವುದ ನೀಳವೂ ನೂರು ಗಾವುದ ಅಗಲವೂ ಸಮತಲವಾದ ಒಂದು ಕಲ್ಲರೆಯಾಗಿ ಆದರ ಮೇಲೆ ಮೊಳಕಾಲುದ್ದ ನೀರು ಉಂಟಾಗಿ ಐರಾವತಕ್ಕೆ ಕ್ರೀಡಾಸ್ಥಾನವಾಗಿರುವುದು. ಇವಿಷ್ಟು ಮೇರುವಿಗೆ ಮೂಡಲಾಗಿರುವ ಸ್ಥಾನಗಳು. ಮೇರುವಿಗೆ ತೆಂಕಲಾಗಿ ತ್ರಿಶಿರ ಪತಂಗಶೈಲಗಳ ನಡುವೆ ಸಿಹಿಯಾಗಿ ತಿಳಿನೀರು ಉಂಟಾದ ಬಹೂದಕವೆಂಬ ಹೊಳೆ ಹರಿಯುತ್ತಿರುವುದು. ಅದರ ತಡಿಯಲ್ಲಿ ನೂರು ಗಾವುದ ನೀಳವೂ ಮೂವತ್ತು ಗಾವುದದ ಅಗಲವೂ ಆದ ಅತ್ತಿಯ ಕಾಡಿರುವುದು. ಆ ಮರಗಳು ಒಂದು ಅಂಬಿನ ಎಸುಗೆಯ ಉದ್ದವಾಗಿ ಹವಳವರ್ಣವಾದ ಹರವಿಯ ತೋರವಾದ ಹಣ್ಣುಗಳುಂಟಾಗಿ ಕರ್ದಮಪ್ರಜಾಪತಿಗೆ ಆಶ್ರಮವಾಗಿರುವುವು. ತಾಮ್ರಾಭ ಪತಂಗ ಶೈಲಗಳ ನಡುವೆ ನೂರು ಗಾವುದದ ನೀಳವೂ ನೂರು ಗಾವುದದ ಅಗಲವೂ ಆದ ಸರಸ್ಸು ಇರುವುದು. ಆದರಲ್ಲಿ ಕೆಂದಾವರೆಗಳು ಬಾಲಸೂರ್ಯನಂತೆ ಪ್ರಕಾಶವಾಗಿರುವುದು. ಆ ಸರೋಮಧ್ಯದಲ್ಲಿರುವ ಒಂದು ಬೆಟ್ಟದ ಮೇಲೆ ಕೋಟೆ ಕೊತ್ತಲಗಳಿಂದ ಒಪ್ಪುವ ಒಂದು ವಿದ್ಯಾಧರಪುರವಿರುವುದು. ವಿಶಾಲ ಶ್ವೇತಪರ್ವತಗಳ ನಡುವೆ ಮೂವತ್ತು ಗಾವುದ ಅಗಲವೂ ಐವತ್ತು ಗಾವುದ ನೀಳವೂ ಆಗಿರುವ ಒಂದು ಕೊಳ ಇರುವುದು. ಆದರ ತಡಿಯಲ್ಲಿ ಒಂದು ದೊಡ್ಡದಾದ ಮಾವಿನ ಮರ ಇರುವುದು.

ಆದರಲ್ಲಿ ಮಾವಿನ ಹಣ್ಣುಗಳು ಚಿನ್ನಕ್ಕೆ ಸಮನಾಗಿ ಅತ್ಯಂತ ಪರಿಮಳ ಯುಕ್ತವಾಗಿ ಹರವಿಯ ತೋರವಾಗಿರುವುವು. ವಸುಧಾರಾ ರತ್ನ ಧಾರಾ ಪರ್ವತಗಳ ನಡುವೆ ಮೂವತ್ತು ಗಾವುದ ನೀಳವೂ ನೂರು ಗಾವುದ ಅಗಲವೂ ಆದ ಒಂದು ಮುತ್ತುಗದ ವನವಿರುವುದು. ಅದರ ಹೂಗಳು ಯಾವಾಗಲೂ ನೂರು ಗಾವುದ ಪರ್ಯಂತ ಪರಿ ಮಳಿಸುತ್ತಿರುವುದು. ಅದರಲ್ಲಿ ಸೂರ್ಯನಿಗೆ ಆಶ್ರಮವಾಗಿರುವುದು. ಮೇರುವಿಗೆ ಪಡುವಲಾಗಿ, ಸುಪಾರ್ಶ್ವ ಶಿಖಿ ಪರ್ವತಗಳ ನಡುವೆ ನೂರು ಗಾವುದದಗಲವೂ ನೂರು ಗಾವುದ ನೀಳವೂ ಬೆಂಕಿಯಿಂದ ಬೆಂದ ಬಿಸಿಯ ನೆಲವಾಗಿರುವುದು. ಅದರ ನಡುವೆ ಇಪ್ಪತ್ತು ಗಾವುದ ನೆಲ ವಹ್ನಿಮಂಡಲವಾಗಿರುವುದು. ಅದರಲ್ಲಿ ಯಾವಾಗಲೂ ಪ್ರಳಯಕಾಲಾಗ್ನಿ ಸೌದೆಯಿಲ್ಲದೆ ಉರಿಯುತ್ತಿರುವುದು. ಕುಮುದಾಂಜನ ಪರ್ವತಗಳ ನಡುವೆ ಪುಣ್ಯಹ್ರದ ಎಂಬ ಕೊಳ ಇರುವುದು. ಅದರ ತೀರದಲ್ಲಿ ಹತ್ತು ಗಾವುದದ ಅಗಲವೂ ಹತ್ತು ಗಾವುದ ನೀಳವೂ ಆದ ಮಾದಳದ ವನ ವಿರುವುದು. ಆದರಲ್ಲಿ ಯಾವಾಗಲೂ ಅರಿಸಿನದ ಬಣ್ಣವಾಗಿ ಹಿರಿದಾದ ಹಣ್ಣುಗಳಿರುವುದು. ಅದರಲ್ಲಿ ಬೃಹಸ್ಪತಿಗೆ ಆಶ್ರಮವಾಗಿರುವುದು. ಪಿಂಜರ ಸುರಸ ಪರ್ವತಗಳ ನಡುವೆ ಅನೇಕ ಯೋಜನದ ನೀಳವೂ ಅನೇಕ ಯೋಜನದ ಅಗಲವೂ ಆದ ಮಹಾದ್ರೋಣಿ ಎಂಬ ಕೊಳ ಇರುವುದು. ಅದರಲ್ಲಿ ವಿಷ್ಣುವಿಗೆ ಸ್ಥಾನವಾಗಿರುವುದು. ಕೃಷ್ಣ ಪಾಂಡರ ಪರ್ವತಗಳ ನಡುವೆ ಮೂವತ್ತು ಗಾವುದದ ಅಗಲವೂ ತೊಂಬತ್ತು ಗಾವುದ ನೀಳವೂ ಆಗಿ ಮರಗಿಡಗಳು ಒಂದೂ ಇಲ್ಲದೆ ನಿಷ್ಪಂಕದೀರ್ಘಿಕೆ ಎಂಬ ಕೊಳ ಇರುವುದು. ಅದರಲ್ಲಿ ಐದು ಗಾವುದದ ಅಗಲವಾದ ಆಲದ ಮರವಿರುವುದು. ಆ ಮರದಲ್ಲಿ ಚಂದ್ರವರ್ಣನಾಗಿ ನೀಲ ವಸ್ತ್ರ ಧರನಾದ ಸಹಸ್ರವದನನೆಂಬ ಸ್ವಾಮಿ ಯಕ್ಷಾದಿಗಳಿಂದ ಯಾವಾಗಲೂ ಪೂಜಿಸಲ್ಪಡುತ್ತಿರುವನು. ಸಹಸ್ರ ಶಿಖರ ಕುಮುದಪರ್ವತಗಳ ನಡುವೆ ಐವತ್ತು ಗಾವುದದ ಅಗಲವಾದ ಹಲವು ಸಿಹಿ ಹಣ್ಣುಗಳು ಉಂಟಾದ ವನವಿರುವುದು. ಅದರಲ್ಲಿ ಚಂದ್ರನಿಗೆ ಆಶ್ರಮವಾಗಿರುವುದು. ಮೇರುವಿಗೆ ಬಡಗಲಾಗಿ ಶಂಖಕೂಟ ನಿಷಧಪರ್ವತಗಳ ನಡುವೆ ಅನೇಕ ಯೋಜನದ

ಅಗಲವಾದ ಪುರುಷಸ್ಥಲ ಎಂಬ ಸ್ಥಾನವಿರುವುದು. ಅದರಲ್ಲಿ ಮರಗಳು ಅನೇಕ ಯೋಜನದ ಉದ್ದ ಆಗಿರುವುವು. ಕಪಿಂಗ ನಾಗಪರ್ವತಗಳ ನಡುವೆ ನೂರು ಗಾವುದದ ಅಗಲವೂ ಇನ್ನೂರು ಗಾವುದದ ನೀಳವೂ ಆಗಿ ದ್ರಾಕ್ಷಾಖರ್ಜೂರದ ವನವಿರುವುದು. ಅದರಲ್ಲಿ ಯಾವಾಗಲೂ ಹಣ್ಣುಗಳು ಅತ್ಯಂತ ಮಧುರವಾಗಿರುವುವು. ಪುಷ್ಕರಮೇಘಪರ್ವತಗಳ ನಡುವೆ ನೂರು ಗಾವುದ ನೀಳವೂ ಅರುವತ್ತು ಗಾವುದದ ಅಗಲವೂ ಆದ ಕಲ್ಲುಬಂಡೆ ಇರುವುದು. ಅದರಲ್ಲಿ ನಾಲ್ಕು ದಿಕ್ಕಿನಲ್ಲೂ ಅನೇಕ ಯೋಜನ ವಿಶಾಲಾಯತವಾದ ನಾಲ್ಕು ಕೊಳಗಳೂ ನಾಲ್ಕು ವನಗಳೂ ಇವೆ. ಕೇಸರಮರ್ಯಾದಾ ಪರ್ವತಗಳ ಮೇಲೆ ಎಂಟು ಬಗೆಯ ದೇವತೆಗಳ ಪಟ್ಟಣಗಳಿವೆ. ಇವು ಇಷ್ಟೂ ಭೋಗಭೂಮಿಗಳು ಎನಿಸುವುವು. ಇವುಗಳಲ್ಲಿ ಅನುಭವಿಸುವ ಭೋಗ ಅನಿತ್ಯವಾದುದರಿಂದ ನಾನು ಇವನ್ನು ಬಯಸಿದವನಲ್ಲ; ನಿತ್ಯಭೋಗವೆನ್ನಿಸುವ ನಿನ್ನ ಊಳಿಗವನ್ನೇ ಬಯಸಿದೆನು. ನಿಖಿಲಭೋಗಪ್ರದನಾದ ನೀನು ನನಗೆ ಇದನ್ನು ನೆಲೆಗೊಳಿಸುವುದು, ನೆಲೆಗೊಳಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಹದಿನೇಳನೆಯ ಬಿನ್ನಹ

ನಿನ್ನ ಚರಣಾಬ್ಜಕ್ಕೆ ಮೊದಲು ಒಮ್ಮೆಯಾದರೂ ಮಣಿದವರು ನರಕದಲ್ಲಿ ಇಳಿಯುವರೆ? ಇಲ್ಲ—ಎಂದು ಉರುವಿಕ್ರಮನ ಅಡಿದಾವರೆಗೆ ಅಬಿನ್ನಪವೇಶ್ಯಾಭುಜಂಗನು ಅನುಗೊಳ್ಳುವಂತೆ ಹೇಳಿದನು.

ನರಕಾಂತಕಾ! ನರಕ ಎಂಬುದು ದುಃಖದ ಅನುಭವಸ್ಥಾನ. ಈ ನರಕಗಳು ಸಪ್ತಪಾತಾಳಲೋಕಗಳ ಕೆಳಗಿನ ಗರ್ಭೋದಕಕ್ಕೆ ಕೀಳಾಗಿಯೂ ಬ್ರಹ್ಮಾಂಡಕಟಾಹವನ್ನು ಹತ್ತಿದ ಗರ್ಭೋದಕಕ್ಕೆ ಮೇಲಾಗಿಯೂ ಇರುವ ಬಯಲಲ್ಲಿ ತೆಂಕಣ ದೆಸೆಯಲ್ಲಿರುವ ರೌರವ ಸೂಕರ ರೋಧ ಎಂಬ ಇವು ಮೊದಲಾಗಿ ಹಲವು ತೆರನಾಗಿರುವುದು. ರೌರವವೆಂಬ ನರಕದಲ್ಲಿದ್ದವನನ್ನು ಯಮಭಟರು ಹುಲ್ಲೆಯನ್ನು ಬೇಟೆಕಾರರು ಇಸುವಂತೆ ದಯೆಯಿಲ್ಲದೆ ಯಾವಾಗಲೂ ಇಸುತ್ತಿರುವರು. ತಾನು ಸಾಕ್ಷಿಯಾಗಿದ್ದುದನ್ನು ಕಂಡಂತೆ ನುಡಿಯದವನೂ ಕಾಣದು

ದನ್ನು ನುಡಿದವನೂ ಧರ್ಮಾಧಿಕಾರದಲ್ಲಿ ನಿಂತು ಪಕ್ಷಪಾತ ಮಾಡು ವವನೂ ಹುಸಿಗಾರನೂ ಈ ನರಕದಲ್ಲಿ ಬೀಳುವರು. ಬೇಟೆಯಲ್ಲಿ ಸಿಕ್ಕಿದ ಹಂದಿಯನ್ನು ಇರಿಯುವಂತೆ ಯಾವಾಗಲೂ ಇರಿಯುತ್ತಿರುವರು. ಆ ನರಕ ಸೂಕರ ಎನಿಸುವುದು. ಗರ್ಭವನ್ನು ಕರಗಿಸಿದವನೂ ಮೂಗು ಬಾಯಿಗಳನ್ನು ಮುಚ್ಚಿ ಕೊಲ್ಲುವವನೂ ಗೋಹತ್ಯೆಗೈವವನೂ ಇದರಲ್ಲಿ ಬೀಳುವರು. ನೆಲೆಮನೆ ಮಾಡಿ ಕಲ್ಲಿನಲ್ಲಿ ಹೂಳುವವರ ನರಕ ರೋಧ ಎನಿಸುವುದು. ಬ್ರಹ್ಮಹತ್ಯಾ ಸುರಾಪಾನ ಸ್ವರ್ಣಸ್ತೇಯ ಗುರುತಲ್ಪ ಗಮನ ತತ್ಸಂಯೋಗಗಳು ಎನಿಸುವ ಪಂಚಮಹಾ ಪಾತಕಗಳನ್ನು ಮಾಡಿದವರು ಇದರಲ್ಲಿ ಬೀಳುವರು. ಉನ್ನತವಾದ ಹನೆಯ ಮರದಿಂದ ನೆಲಕ್ಕೆ ಕೆಡಹುವ ನರಕ ತಾಳ ಎನಿಸುವುದು. ಕ್ಷತ್ರಿಯ ವೈಶ್ಯರುಗಳನ್ನು ಕೊಂದವರು ಇದರಲ್ಲಿ ಬೀಳುವರು. ಕಾಯ್ದೆಣ್ಣೆಯ ಕೊಪ್ಪರಿಗೆಯಲ್ಲಿ ಕುದಿಯಿಸುವ ನರಕ ತಪ್ತಕುಂಭ ಎನ್ನಿಸುವುದು. ಪತಿವ್ರತೆಯನ್ನು ಮಾರಿದವನೂ ಕುದುರೆಯನ್ನು ಕೊಂದು ಮಾರುವವನೂ ನಂಬಿದವ ರನ್ನು ಕೈಬಿಡುವವನೂ ಒಡಹುಟ್ಟಿದವಳಿಗೆ ಆಸೆಪಟ್ಟವನೂ ಅರ ಮನೆಯ ಮನುಷ್ಯರನ್ನು ಸಾಯಿಸಿದವನೂ ಇದರಲ್ಲಿ ಬೀಳುವರು. ಬೆಂಕಿಯಲ್ಲಿ ಹುರಿದು ಚೌಳುಪ್ಪಿನಲ್ಲಿ ಹೊರಳಿಸುವ ನರಕ ಲವಣ ಎನ್ನಿ ಸುವುದು. ತಂದೆತಾಯಿ ಮೊದಲಾದ ಹಿರಿಯರನ್ನು ದೂಷಿಸುವವನೂ ವೇದವನ್ನು ನಿಂದಿಸುವವನೂ ಕೂಲಿಗೆ ವೇದವನ್ನು ಓದಿಸುವವನೂ ಸೋದರಮಾವನ ಹೆಂಡತಿಗೆ ಆಸೆಪಟ್ಟವನೂ ಇದರಲ್ಲಿ ಬೀಳುವರು. ಕತ್ತಲೆ ಮುಸುಕಿದ ಎಡೆಯಲ್ಲಿ ಕಾಡನೊಣ ಜಿಗುಳೆ ಮೊದಲಾದ ಕ್ರೂರ ಜಂತುಗಳು ಎಡೆಬಿಡದೆ ಕಡಿಯುವ ನರಕ ಕ್ರಿಮಿಭಕ್ಷ ಎನಿಸುವುದು. ದೇವಬ್ರಾಹ್ಮಣದ್ವೇಷಿಯೂ ಸದಾಚಾರವನ್ನು ಬಿಟ್ಟವನೂ ಇದರಲ್ಲಿ ಬೀಳುವರು. ಇತರರು ಉಗುಳಿದ ನೀರನ್ನು ಭಕ್ಷಿಸುವ ನರಕ ಲಾಲಾ ಭಕ್ಷ ಎನಿಸುವುದು. ದೇವಪೂಜೆಯೂ ಪಿತೃಕರ್ಮ ಮೊದಲಾದುದೂ ಒಂದೂ ಇಲ್ಲದೆ ತನಗೆ ಎಂದು ಅಡಿಗೆಮಾಡಿ ತಿನ್ನುವವರು ಇದರಲ್ಲಿ ಬೀಳುವರು. ಕತ್ತಿ ಚೂರಿ ಮೊದಲಾದ ಅಲಗುಗಳು ನಟ್ಟಿರುವ ಬಾವಿ ಯಲ್ಲಿ ನೂಕುವ ನರಕ ವಿಶಸನ ಎನಿಸುವುದು. ಆಯುಧಗಳನ್ನು ಮಾಡಿ

ಬದುಕುವವರೂ ಬೇಹುಕಂಬು ಮೊದಲಾದ ಕಪಟಾಯುಧಗಳನ್ನು ಧರಿಸಿದವರೂ ಇದರಲ್ಲಿ ಬೀಳುವರು. ಕಾಸಿದ ಸಂಕಲೆಯನ್ನು ಕಾಲಿಗೆ ತೊಡಿಸಿ ಉರಿಮಸಗುವ ಬಾವಿಯಲ್ಲಿ ತಲೆ ಕೆಳಗುಮಾಡಿ ತೂಗುವ ನರಕ ಅಧೋಮುಖ ಎನಿಸುವುದು. ಶಾಸ್ತ್ರನಿಷಿದ್ಧವಾದ ವಸ್ತುಗಳನ್ನು ಪರಿಗ್ರಹಿಸುವವರು ಇದರಲ್ಲಿ ಬೀಳುವರು. ಹೊಲಸು ನಾರುವ ಕೀವಿನ ತೊರೆಯ ನರಕ ಪೂಯವಹ ಎನಿಸುವುದು. ದುಡುಕುಗಾರನೂ ಎಲ್ಲರನ್ನೂ ಬಿಟ್ಟು ತಾನೊಬ್ಬನೇ ಮೃಷ್ಟಾನ್ನವುಣ್ಣುವವನೂ ಅಡಗು ಮಾಂಸ ಹಾಲು ಮೊಸರು ತುಪ್ಪ ಜೇನು ಮೊದಲಾದ ಸದ್ದ್ರವ್ಯವನ್ನೂ ಎಳ್ಳು ಉಪ್ಪು ಮೊದಲಾದುವನ್ನು ಮಾರುವವನೂ ಇದರಲ್ಲಿ ಬೀಳುವರು. ಕಾಸಿದ ಕೀವೂ ನೆತ್ತರೂ ತುಂಬಿದ ಬಾವಿ ರುಧಿರಾಂಭಸನರಕ ಎನಿಸುವುದು. ಟಗರು ಕೋಳಿ ಮುಂತಾದುವನ್ನು ಜೂಜುಗಾಳಿಗಕ್ಕೆ ಬಿಡುವವನೂ ಅಡಿಗೆಮಾಡಿದ ಮಡಕೆಯಲ್ಲೇ ಉಂಬುವವನೂ ವಿಷವನ್ನು ಇಕ್ಕುವವನೂ ಅರಸುಗಳ ಸಂಗಡ ಇಲ್ಲದ ಚಾಡಿ ಹೇಳುವವನೂ ಹೆಂಡಿತಿ ಸಂಪಾದಿಸಿದ ಒಡವೆಯಿಂದ ಬದುಕುವವನೂ ಅಮಾವಾಸ್ಯೆ ಸಂಕ್ರಮಣ ಮೊದಲಾದ ಪರ್ವಕಾಲದಲ್ಲಿ ಅಭ್ಯಂಗ ಸ್ತ್ರೀಸಂಗ ಮೊದಲಾದುವನ್ನು ಮಾಡಿದವನೂ ಮನೆಗಳನ್ನು ಕಿಚ್ಚಿಕ್ಕಿ ಸುಡುವವನೂ ಹಕ್ಕಿಯ ನಿಮಿತ್ತವನ್ನು ಹೇಳುವವನೂ ಹಕ್ಕಿಗಳನ್ನು ಹಿಡಿದು ಮಾರಿ ಬದುಕುವವನೂ ಗ್ರಾಮಯಾಜಕನೂ ಇದರಲ್ಲಿ ಬೀಳುವರು. ಬೆಂಕಿಯಂತೆ ಕಾಯ್ದ ತುಪ್ಪದ ತೊರೆ ವೈತರಣಿ ಎನಿಸುವುದು. ಜೇನನ್ನು ಸಾಯಿಸುವವನೂ ಗ್ರಾಮಕ್ಕೆ ಕೇಡನ್ನು ಎಣಿಸುವವನೂ ಇದರಲ್ಲಿ ಬೀಳುವರು. ಕಾಯ್ದ ಕಬ್ಬಿಣದ ಮೊಳೆಗಳನ್ನು ನಾಟಿರುವ ನೆಲದಲ್ಲಿ ನಡೆಯುವ ನರಕ ಕೃಷ್ಣ ಎನಿಸುವುದು. ಧನದಿಂದಲೂ ಯೌವನದಿಂದಲೂ ಕೊಬ್ಬಿ ಮೇರೆಯನ್ನು ಮೀರಿ ನಡೆಯುವವನೂ ಎಂಜಲು ಪುಲಿಗೆಗಳಿಗೆ ಹೇಸದವನೂ ಇಂದ್ರಜಾಲ ಮೊದಲಾದ ಕಪಟ ವಿದ್ಯೆಯಿಂದ ಬದುಕುವವನೂ ಇದರಲ್ಲಿ ಬೀಳುವರು. ಹೀಗೆ ಇವು ಮೊದಲಾದ ಹಲವು ತೆರದ ಪಾತಕಗಳನ್ನು ಮಾಡಿದವರು ಬೀಳುವ ನರಕಗಳು ಹಲವು ತೆರನಾಗಿ ಮಿತಿಯಿಲ್ಲದಿರುವುವು. ನಿನ್ನ ದಿವ್ಯ ಸಂಕೀರ್ತನದಿಂದಲೇ ಸಕಲ ನರಕಭಯವೂ

ಪರಿಹಾರವಾಗುವುದರಿಂದ ನಿನಗೆ ನರಕಾಂತಕನೆಂಬ ಹೆಸರಾಗಿರುವುದು. ಹೀಗಿರುವ ನಿನ್ನನ್ನೇ ನೆರೆನಂಬಿದ ನನ್ನ ಭಯವನ್ನು ಪರಿಹರಿಸಿ, ನಿನ್ನ ಅಡಿಯ ಊಳಿಗವ ಕೊಟ್ಟು, ಮನ್ನಿಸುವುದು, ಮನ್ನಿಸುವುದು, ಅನನ್ಯ ಜನಸುಲಭ, ಶ್ರೀ ಯದುಶೈಲವಲ್ಲಭಾ!

## ಹದಿನೆಂಟನೆಯ ಬಿನ್ನಹ

ಉದ್ಧತರಾದ ಪಾಪಿಗಳು ಕೂಡ ನಿನ್ನ ಅಡಿಯನ್ನು ನೆನೆದ ಮಾತ್ರದಲ್ಲೇ ಪರಿಶುದ್ಧರು ಆಗುವರು— ಎಂದು ಆ ಸಿದ್ಧಗರುಡಧ್ವಜಾಂಕನು ಸಿದ್ಧಾರ್ಚಿತಪದಯುಗನಿಗೆ ಬಿನ್ನಹ ಮಾಡಿದನು.

ಪರಮಪಾವನಾ! ಪಾಪಗಳು ಎಂಬುವು ಕಾಯಿಕಗಳೆಂದೂ ವಾಚಿಕಗಳೆಂದೂ ಮಾನಸಿಕಗಳೆಂದೂ ಮೂರು ತೆರನಾಗಿರುವುದು. ಕೆಟ್ಟ ವಸ್ತುಗಳನ್ನು ತಿನ್ನುವುದೂ ಕೆಟ್ಟವರ ಮನೆಯಲ್ಲಿ ಉಣ್ಣುವುದೂ ಕೆಟ್ಟವರಿಗೆ ಯಜ್ಞಾದಿ ಕ್ರಿಯೆಗಳನ್ನು ಮಾಡಿಸುವುದೂ ಕೆಟ್ಟವರಿಂದ ದಾನವನ್ನು ಕೊಳ್ಳುವುದೂ ಪರರ ಹೆಂಡಿರಿಗೆ ಆಸೆಪಡುವುದೂ ಕೆಟ್ಟವರನ್ನು ಓಲಗಿಸುವುದೂ ಪರರ ಒಡವೆಯನ್ನು ಅಪಹರಿಸುವುದೂ ಪ್ರಾಣಿಹಿಂಸೆ ಮಾಡುವುದೂ ಮೊದಲಾದುವು ಕಾಯಿಕವಾದ ಪಾಪಗಳು ಎನಿಸುವುವು. ನಿಷ್ಠುರವಾದ ಮಾತು ಆಡುವುದೂ ಹುಸಿಮಾತು ಆಡುವುದೂ ಚಾಡಿ ಹೇಳುವುದೂ ಇಹಪರ ಪ್ರಯೋಜನವಿಲ್ಲದ ಬರಿ ಮಾತಿನಲ್ಲಿ ಹೊತ್ತು ಕಳೆಯುವುದೂ ವಿವಾದ ಮಾಡುವುದೂ ವೇದವನ್ನು ಕೂಲಿಗೆ ಓದಿಸುವುದೂ ಪರನಿಂದೆಗೈವುದು ಮೊದಲಾದುವು ವಾಚಿಕಪಾಪಗಳು ಎನಿಸುವುವು. ಪರರಿಗೆ ದ್ರೋಹವನ್ನು ಎಣಿಸುವುದೂ ಸಲ್ಲದ ಆಸೆಯೂ ಸಲ್ಲದ ಕೋಪವೂ ಲೋಭವೂ ಅಜ್ಞಾನವೂ ಕೊಬ್ಬೂ ಕೇಣಸರವೂ ಮೊದಲಾದುವು ಮಾನಸಿಕಪಾಪ ಎನಿಸುವುವು. ಈ ಪ್ರಕಾರದ ಪಾಪಗಳನ್ನು ಮಾಡಿದವರು ಯಾವ ಯಾವ ರೀತಿಯ ಶರೀರದಲ್ಲಿ ಯಾವ ಯಾವ ತೆರದಲ್ಲಿ ಪಾಪಗಳನ್ನು ಮಾಡಿದರೋ, ಮರಣಾಂತದಲ್ಲಿ ಅದೇ ಪ್ರಕಾರದ ಯಾತನಾಶರೀರವನ್ನು ಪರಿಗ್ರಹಿಸುವರು. ಯಾತನಾಶರೀರ ಎಂಬುದು ಕೊಯ್ದರೂ ಕೊರೆದರೂ ಸೀಳಿದರೂ ಸುಟ್ಟರೂ ಅಳಿದು

ಹೋಗದೆ, ಮುಟ್ಟಿದರೆ ಕಂದುವಂತೆ ಮೆಲ್ಲಿತ್ತಾಗಿ ಮಿತಿಯಿಲ್ಲದ ವೇದನೆಯನ್ನು ಅನುಭವಿಸುತ್ತಿರುವುದು. ಹೀಗಿರುವ ಶರೀರದಲ್ಲಿ ಪಾಪಿಗಳನ್ನು ಯಾತನೆಪಡಿಸುವ ಕ್ರಮ ಹೇಗೆಂದರೆ: ಈ ಪಾಪಿಯನ್ನು ನಿಲ್ಲಿಸಿ ಗರಗಸದಿಂದ ಕೊಯ್ಯುವುದು, ಬಾಚಿಯಲ್ಲಿ ಕೆತ್ತುವುದು, ಚೌಳು ನೆಲದಲ್ಲಿ ಹೊರಳಿಸುವುದು, ನಿಂಬೆಹುಳಿಯ ಮಡುವಿನಲ್ಲಿ ಮುಳುಗಿಸುವುದು, ಕಾಯ್ದ ಎಣ್ಣೆಯ ಕೊಪ್ಪರಿಗೆಯಲ್ಲಿ ಕುದಿಸುವುದು, ತಳಸಿದ ಕೊಡಲಿಯಲ್ಲಿ ಸಂದುಸಂದುಗಳನ್ನು ಕತ್ತರಿಸುವುದು, ಹದ್ದು ಕಾಗೆ ಗೂಗೆ ನಾಯಿನರಿಗಳಿಗೂ ಭೂತ ಪ್ರೇತ ಪಿಶಾಚಕಗಳಿಗೂ ಕರುಳು ನೆತ್ತರು ಕಂಡಗಳನ್ನು ಹಂಚುಕೊಡುವುದು, ಸಾಣೆ ಹಿಡಿದ ಶಸ್ತ್ರದಂತಿರುವ ಎಲೆಗಳಿಂದ ಎಸೆಯುವ ಎಲೆಕಳ್ಳಿಯ ಕಾಡೆಂಬ ಅಸಿಪತ್ರವನದಲ್ಲಿ ಅತ್ತಣಿಂದ ಇತ್ತಣ್ಗೆ ಓಡಿಸಿ ಇತ್ತಣಿಂದ ಅತ್ತಣ್ಗೆ ಓಡಿಸಿ ಮೆಯ್ಯ ಕಂಡ ಕರುಳುಗಳನ್ನು ಕತ್ತರಿಸುವುದು, ಕವಣೆಯಲ್ಲಿ ಇರಿಸಿ ಬೀಸಿ ಬೀಸಿ ಇಡುವುದು, ಉದ್ದವಾದ ಬೆಟ್ಟದ ಕೊನೆಯ ಕೋಡುಗಲ್ಲುಗಳ ಮೇಲೆ ಕುಳ್ಳಿರಿಸಿ ಜರಿಗೆ ತಲೆ ಕೆಳಗುಮಾಡಿ ನೂಕುವುದು, ಕಾಯ್ದ ಕಾವಲಿಯ ಮೇಲೆ ಹೊರಳಿಸುವುದು, ಮೆಯ್ಯೆಲ್ಲವನ್ನೂ ಹಿರಿದು ಕಿರಿದಾಗಿ ಕತ್ತರಿಸುವುದು, ಕತ್ತರಿಸಿದ ತುಂಡುಗಳನ್ನು ಗುಂಬದಲ್ಲಿ ತುಂಬಿ ಕುದಿಸುವುದು—ಇವು ಮೊದಲಾದ ಯಾತನೆಗಳು ಹಲವನ್ನು ಕೋಟಿಯುಗ ಅನುಭವಿಸಿ, ಪುನಃ ಭೂಮಿಯಲ್ಲಿ ಹುಟ್ಟುವಾಗಲೂ ಮಾನಸಿಕ ಪಾಪಗಳನ್ನು ಮಾಡಿದವರು ಮೃಗಪಕ್ಷಿಗಳಾಗಿಯೂ ಕಾಯಿಕಪಾಪಗಳನ್ನು ಮಾಡಿದವರು ಹುಲ್ಲುಗಿಡಮರಗಳಾಗಿಯೂ ಹುಟ್ಟುವರು. ಈ ಪಾಪಿಗಳಲ್ಲೂ ಬ್ರಹ್ಮಹತ್ಯೆಗೈದವರು ಶ್ವಾನಸೂಕರ ಖರ ಉಷ್ಟ್ರ ಯೋನಿಗಳಲ್ಲೂ ಆಡು ಕುರಿ ಹುಲ್ಲೆ ಹಕ್ಕಿಗಳಲ್ಲೂ ಚಂಡಾಲಯೋನಿಗಳಲ್ಲೂ ಹಲವು ಬಾರಿ ಹುಟ್ಟುತ್ತಿರುವರು. ಸುರಾಪಾನವನ್ನು ಮಾಡಿದ ಹಾರುವರು ಕ್ರಿಮಿ ಕೀಟ ಪತಂಗಯೋನಿಗಳಲ್ಲೂ ಅಮೇಧ್ಯಭಕ್ಷಕಗಳಾದ ಶ್ವಾನಸೂಕರ ಮೊದಲಾದುವಲ್ಲೂ ಹಿಂಸಕಗಳಾದ ಹುಲಿ ಕರಡಿ ಮುಂತಾದವುಗಳಲ್ಲೂ ಅಸ್ಪೃಶ್ಯಗಳಾದ ಕಾಗೆ ಗೂಗೆ ಮೊದಲಾದುವುಗಳಲ್ಲೂ ಅಂತ್ಯ ಜಾತಿಯಲ್ಲೂ ಹಲವು ಬಾರಿ ಹುಟ್ಟುತ್ತಿರುವರು. ಚಿನ್ನವನ್ನು ಕದ್ದವರು ಹಾವು ಹಲ್ಲಿ

ಗಳಲ್ಲೂ ನೀರಕಾಗೆ ಕೋಳಿ ಮೊದಲಾದ ಜಲಚರ ಪಕ್ಷಿಗಳಲ್ಲೂ ಭೂತ ಪ್ರೇತ ಪಿಶಾಚ ಬ್ರಹ್ಮರಾಕ್ಷಸ ಜಾತಿಯಲ್ಲೂ ಹುಟ್ಟುತ್ತಿರುವರು. ಗುರು ತಲ್ಪಗಮನವನ್ನು ಮಾಡಿದವರು ಹುಲ್ಲು ಪೊದರು ಬಳ್ಳಿಗಳಾಗಿಯೂ ಹೆಣವನ್ನು ತಿನ್ನುವ ನಾಯಿ ನರಿಗಳಾಗಿಯೂ ಕ್ರೂರಕರ್ಮರತರಾದ ಮನುಷ್ಯರಾಗಿಯೂ ಹುಟ್ಟುತ್ತಿರುವರು. ಈ ಮಹಾಪಾತಕಿಗಳೊಡನೆ ಆಡುವ ತತ್ಸಂಯೋಗವೆಂಬ ಪಾತಕವನ್ನು ಮಾಡಿದವರು ಬ್ರಹ್ಮರಾಕ್ಷಸ ಯೋನಿಯಲ್ಲಿ ಹುಟ್ಟುತ್ತಿರುವರು. ಹೀಗೆ ಇವು ಮೊದಲಾಗಿ ಹಲವು ತೆರದ ಪಾಪಗಳನ್ನು ಮಾಡಿದವರು ಹಲವು ಪಾಪಯೋನಿಗಳಲ್ಲಿ ಹುಟ್ಟು ತ್ತಿರುವರು. ಈ ಪಾತಕಿಗಳು ತಮ್ಮ ಪಾತಕಗಳು ಅಷ್ಟಕ್ಕೂ ಬೇರೆ ಬೇರೆ ಪ್ರಾಯಶ್ಚಿತ್ತವನ್ನು ಮಾಡುವುದು ಜನ್ಮಕೋಟಿಯಲ್ಲಿಯೂ ತೀರದು. ದಯಾಳುವಾದ ನಿನ್ನ ಕಟಾಕ್ಷದಿಂದ ಮನಸ್ಸಿನಲ್ಲಿ ವಿವೇಕಹುಟ್ಟಿ, ಹಿಂದಿನ ಪಾಪಕ್ಕೆ ಪಶ್ಚಾತ್ತಾಪ ಉಂಟಾಗಿ ಯಥಾಶಕ್ತಿ ಪ್ರಾಯಶ್ಚಿತ್ತವನ್ನು ಆಚರಿಸಿ, ನೀನು ಆಳ್ದನು ತಾನು ಆಳು ಎಂಬ ಎಣಿಕೆ ಕೂಡಿ, ನಿನ್ನನ್ನೇ ನೆನೆಯುತ್ತಿರುವುದು ಎಂಬ ಕೃಷ್ಣಾನುಸ್ಮರಣ ಒಂದರಿಂದಲೇ ಸಕಲ ಪಾಪಗಳೂ ವಾಸನಸಹಿತವಾಗಿ ಹೋಗುವುವು ಎಂಬ ಶಾಸ್ತ್ರಾರ್ಥತತ್ತ್ವ ವನ್ನು ತಿಳಿಯಲು, ನೀನೇ ಪರಮಪಾವನನು ಎನಿಸುವೆ. ಆದರಿಂದ ನೀನು ನನ್ನ ಪಾಪಗಳನ್ನು ಹಿರಿದು ಎನ್ನಿಸದೆ ನಿನ್ನ ಪಾವನತ್ವವನ್ನು ಮೆರೆದು, ನನ್ನನ್ನು ಪೊರೆಯುವುದು, ಪೊರೆಯುವುದು, ಅನನ್ಯಜನ ಸುಲಭ, ಶ್ರೀ ಯದುಶೈಲವಲ್ಲಭಾ!

# ಕಡೆಯ ಹನ್ನೆರಡು ಬಿನ್ನಹ

## ಹತ್ತೊಂಬತ್ತನೆಯ ಬಿನ್ನಹ

ಶ್ರೀಪತಿಯು ಲೋಕಕರ್ತೃವು, ನಿಗಮಗಳಿಂದ ಸ್ತುತನು, ಅದ್ಭುತವಾದ ವೈಭವವುಳ್ಳವನು, ಜಗದ್ರೂಪನು, ಅಸಾಧ್ಯವನ್ನು ಸಾಧಿಸುವವನು, ಅಶೇಷಕ್ಕೆ ಸಮನಾದವನು, ಪರತತ್ತ್ವನು, ಬೇರೆಬೇರೆಯಾದ ವಿಚಿತ್ರಕರ್ಮಗಳಿಗೆ ತಕ್ಕ ಫಲ ಕೊಡುವವನು, ಎಂದು ಮಹೀಮಹೇಂದ್ರನು ಹದಿನೆಂಟು ಉದಾರವಾದ ಗದ್ಯದಲ್ಲಿ ದೈತ್ಯವೈರಿಗೆ ಒರೆದನು.

ಭಾವಿಸಲಾಗಿ, ಹದಿನಾಲ್ಕು ಲೋಕವೂ ಅಸುಖವು, ಅನಿತ್ಯವು; ಪರಬ್ರಹ್ಮವೊಂದೇ ವಿದಿತವು, ನಿತ್ಯವೂ ಅಮಿತವೂ ಆದ ಆನಂದಮಯವು—ಎನ್ನಿಸುವ ಈ ಘಂಟಾರ್ಥವನ್ನು ಭಾವಿಸಲಾಗಿ, ಈ ಸಂದರ್ಭದಲ್ಲಿ ವೈರಾಗ್ಯವೂ ಮೋಕ್ಷದಲ್ಲಿ ಎರಕವೂ ಬುಧರಿಗೆ ಆಗುವುದು ಎಂದು ಹೆಚ್ಚಾದ ಮುದದಿಂದ ಪ್ರೌಢಪ್ರತಾಪನು ಸನಕಮುನಿಸಮಾರಾಧಿತನಾದವನಿಗೆ ಒಲಿದು ಹೇಳಿದನು.

ಮುಕ್ತಿಯಲ್ಲಿ ಆಸೆಯೂ ಇತರದಲ್ಲಿ ವಿರಕ್ತಿಯೂ ಅನುಗೂಡಿದವರಿಗೆ ಮೋಕ್ಷೋಪಾಯವು ಯುಕ್ತ ಎನ್ನುವಂತೆ, ಅನಿತರಭಕ್ತಕುಟುಂಬನಿಗೆ ಮಣಿದು ಚಿಕದೇವೇಂದ್ರನು ಹೇಳಿದನು.

ಎರಡಾರು ಗದ್ಯದಲ್ಲಿ, ಇನ್ನು ಓರಂತೆಯೆ ಮುಕ್ತ್ಯುಪಾಯವನ್ನೂ ಮೋಕ್ಷವನ್ನೂ, ಸೂರಿಸಮಾಜವು ಸೈಯೆನ್ನುವಂತೆ, ನಾರಾಯಣನ ಅಡಿಗೆ ಅಭೇದ್ಯವಿಕ್ರಮನು ಉಸಿರಿದನು.

ಮೋಕ್ಷದಾನೈಕದೀಕ್ಷಿತಾ! ಲೋಕದವರು ಬಯಸುವ ಪುರುಷಾರ್ಥಗಳಲ್ಲಿ ಅರ್ಥಕಾಮ ಮೊದಲಾದುವು ಅಸ್ಥಿರಗಳು ಅಲ್ಪಸುಖಗಳು ಎಂದು ಅವುಗಳನ್ನು ಜರೆದು, ನಿತ್ಯವೂ ನಿರವಧಿಕಾನಂದವೂ ಆದುದರಿಂದ ಮೋಕ್ಷವೊಂದನ್ನೇ ಹೊಗಳಿ, ಇದನ್ನು ಸಾಧಿಸುವುದಕ್ಕೆ ಕರ್ಮ ಜ್ಞಾನ ಭಕ್ತಿ ಮೊದಲಾದುವು ಉಪಾಯಗಳೆಂದೂ ವೇದಾಂತಗಳಿಂದ ತಿಳಿಸಿದೆ. ಈ ತತ್ತ್ವಾರ್ಥವನ್ನು ಹಿರಿಯರ ಉಪದೇಶದಿಂದ ಅರಿತು ವಿಚಾರಿಸಲು: ಕರ್ಮಯೋಗ ಎಂಬುದು—ಅರಿವೂ ಆಪೂರ್ವ ಪುರುಳೂ ಇಲ್ಲದ ನಮಗೆ ನೀನು ಇವೆಲ್ಲವನ್ನೂ ಕೊಟ್ಟು ನೀನು ಕೊಟ್ಟ ಸಾಮಗ್ರಿಯಿಂದ ನಿನ್ನ ಊಳಿಗವಾದ ನಿತ್ಯಕರ್ಮಗಳನ್ನು ನಮ್ಮ

ಕೈಯಲ್ಲಿ ಸೀನೇ ಮಾಡಿಸುವುದರಿಂದ ವರ್ಣಾಶ್ರಮ ಧರ್ಮಗಳನ್ನು ನಾವು ಮಾಡುವೆವೆಂಬ ಕರ್ತೃತ್ವಕ್ಕೂ ಈ ಕರ್ಮದಿಂದ ಈ ಫಲವನ್ನು ಪಡೆವೆವು ಎಂಬ ಕಾಮನೆಗೂ ಕಾರಣವಿಲ್ಲವೆಂದು ತಿಳಿದು ಈ ನೆನಪು ಕೂಡಿ ವರ್ಣಾಶ್ರಮಧರ್ಮಗಳನ್ನು ಮಾಡುವ ಜಾಣ್ಮೆ. ಜ್ಞಾನಯೋಗ ವೆಂಬುದು—ಕರ್ಮಯೋಗದಿಂದ ಹಿಂದಿನ ಸಕಲ ಪಾಪಗಳೆಂಬ ಕಲ್ಮಷ ವನ್ನು ಕಳೆದು ನಿರ್ಮಲವೆನಿಸುವ ಅಂತಃಕರಣದಲ್ಲಿ ಶಾಸ್ತ್ರೋಕ್ತಕ್ರಮ ದಿಂದ ಇಪ್ಪತ್ತುನಾಲ್ಕು ತತ್ತ್ವಗಳ ನೆಲೆಯನ್ನು ತಿಳಿದು, ಇವೆಲ್ಲಕ್ಕೂ ಅಧಿಕವೆನಿಸುವ ಜೀವಾತ್ಮ ಪರಮಾತ್ಮಸ್ವರೂಪವನ್ನು ಸಾಕ್ಷಾತ್ಕರಿಸಿದ ಹಾಗೆ ಅರಿಯುವ ತಿಳಿವು. ಭಕ್ತಿಯೋಗವೆಂಬುದು—ಜೀವ ಪರಮರ ನೆಲೆಯನ್ನು ತಿಳಿದು, ನಿತ್ಯವೆನಿಸುವ ವರ್ಣಾಶ್ರಮಧರ್ಮಗಳನ್ನು ಆಚರಿ ಸುತ್ತ, ವೇದಾಂತ ವಿಹಿತಕ್ರಮದಲ್ಲಿ ಪ್ರೀತಿರೂಪವಾಗಿ ನಿನ್ನ ಅಡಿಗಳನ್ನು ಎಡೆಬಿಡದೆ ನೆನೆಯುವ ನಿಧಿಧ್ಯಾಸನ. ಇವುಗಳ ನೆಲೆಯನ್ನು ವಿಚಾರಿ ಸಲು, ಕರ್ಮಯೋಗವು ಮನಸ್ಸಿಗೆ ಪರಿಶುದ್ಧಿಯನ್ನು ಮಾಡುತ್ತಾ ಜ್ಞಾನಯೋಗವನ್ನು ಉಂಟುಮಾಡಿ ಭಕ್ತಿಯೋಗಕ್ಕೆ ಅಂಗವಾಗಿರುವು ದಲ್ಲದೆ ಸ್ವಾತಂತ್ರ್ಯದಿಂದ ಮೋಕ್ಷಸಾಧನವಲ್ಲ; ಜ್ಞಾನಯೋಗವೂ ಭಕ್ತಿಗೈದ ಜೀವಾತ್ಮಸ್ವರೂಪವನ್ನು, ಭಕ್ತಿಗೆ ವಿಷಯವಾದ ನಿನ್ನ ಸ್ವರೂಪವನ್ನು ತಿಳಿಸಿ ಭಕ್ತಿಯೋಗವನ್ನು ಬಳೆಯಿಸುವುದಲ್ಲದೆ ಸ್ವಾತಂತ್ರ್ಯದಿಂದ ಮೋಕ್ಷಸಾಧನವಲ್ಲ; ಭಕ್ತಿಯೋಗವೂ ಆಳ್ದನಾದ ನಿನ್ನ ಅಡಿಯಲ್ಲಿ ಆಳು ಎನಿಸಿದ ನಾವು ಮಾಡುವ ಪ್ರೀತಿ. ಲೋಕದಲ್ಲಿ ಆಳ್ದನಿಗೆ ಆಳುಗಳಲ್ಲಿ ಹುಟ್ಟಿದ ಪ್ರೀತಿಯೇ ಕಾರ್ಯಕರವಲ್ಲದೆ ಆಳು ಎನ್ನಿಸಿದವರಿಗೆ ಆಳ್ದನಲ್ಲಿ ಉಂಟಾದ ಪ್ರೀತಿ ಮಾತ್ರವೇ ಕಾರ್ಯಕರವಲ್ಲ ಎಂಬುದರಿಂದ ಭಕ್ತಿಯೂ ಸಾಕ್ಷಾತ್ತಾಗಿ ಮೋಕ್ಷಸಾಧನವಲ್ಲ. ನಿನ್ನ ಪ್ರೀತಿಯೊಂದೇ ಮೋಕ್ಷಸಾಧನವಾದುದರಿಂದ ನಿನ್ನ ದಯಾಮೃತದಲ್ಲಿ ಹುಟ್ಟಿ ಬಳೆದ ಪರಾಂಕುಶ ಪರಕಾಲ ಯತಿವರ ಮೊದಲಾದವರು ಹಿಡಿದು ಲಕ್ಷ್ಮಣಾಚಾರ್ಯ ಪರ್ಯಂತವಾದ ಹಿರಿಯರನ್ನು ಕುರಿತು ನನ್ನಲ್ಲಿ ದಯೆ ಗೈವುದು, ದಯೆಗೈವುದು, ಅನನ್ಯಜನಸುಲಭ, ಶ್ರೀ ಯದುಶೈಲ ವಲ್ಲಭಾ!

# ಇಪ್ಪತ್ತನೆಯ ಬಿನ್ನಹ

ಸಾತ್ವಿಕಶಾಸ್ತ್ರಗಳಲ್ಲೇ ತತ್ತ್ವವು ನಿರ್ಣೀತವಾಗುವುದು ಎಂದು ಆದರದಿಂದ, ಸಾತ್ವಸಿಧಿಯ ಅರಿಗೆ ವೈಷ್ಣವತತ್ತ್ವೋದ್ಧರಣಪ್ರವೀಣನು ಒಳ್ಳಿಸಿಂದ ಒರೆದನು.

ಸತ್ವಪ್ರವರ್ತಕಾ! ವೇದಾಂತಾರ್ಥವನ್ನು ನಿಶ್ಚಯಿಸುವ ಎಡೆಯಲ್ಲಿ ಇತಿಹಾಸ ಪುರಾಣಗಳಿಂದ ನಿಶ್ಚಯಿಸಬೇಕು. ಅವುಗಳಲ್ಲಿ ಶ್ರೀ ರಾಮಾಯಣ ಭಾರತ ಮೊದಲಾದ ಇತಿಹಾಸಗಳು ನಿನ್ನ ಮಹಿಮೆಯನ್ನೇ ಹೇಳಿದುದರಿಂದ ಸಾತ್ವಿಕಗಳಾಗಿ ಸರ್ವಾಂಶದಲ್ಲೂ ಪ್ರಮಾಣಗಳಾಗಿರುವುವು. ಪುರಾಣಗಳು ಅಷ್ಟೂ ಚತುರ್ಮುಖನು ಪೋಣಿಸಿದುದರಿಂದ ಆ ಚತುರ್ಮುಖನಿಗೆ ಯಾವ ದಿವಸದಲ್ಲಿ ಯಾವ ಗುಣ ಹೆಚ್ಚಿರುವುದು, ಆ ದಿನದಲ್ಲಿ ಹೇಳಿದ ಪುರಾಣವು ಆ ಗುಣವಾಗಿರುವುದು. ಅದು ಹೇಗೆಂದರೆ—ನಾಲ್ಮೊಗನ ದಿನಕ್ಕೆ ಕಲ್ಪ ಎಂದು ಹೆಸರು. ನಾಲ್ಮೊಗನೂ ಪ್ರಕೃತಿಯಲ್ಲಿ ಸಿಕ್ಕಿದವನಾದ ಕಾರಣ ಆತನಿಗೂ ಸತ್ತ್ವ ರಜಸ್ ತಮೋಗುಣಗಳು ಇವೆ. ಯಾವ ಕಲ್ಪಗಳಲ್ಲಿ ಸತ್ತ್ವಗುಣ ಪ್ರಬಲಗುಣವಾಗಿರುವುದು, ಆ ದಿವಸಗಳಲ್ಲಿ ಹೇಳಿದ ಪುರಾಣಗಳು ಸಾತ್ತ್ವಿಕಗಳು ಎನ್ನಿಸಿ, ನಿನ್ನ ಮಹಿಮೆಯನ್ನು ಹೊಗಳಿ ಮೋಕ್ಷಸಾಧನವಾಗಿರುವುವು. ಮತ್ತೆ ಯಾವ ದಿವಸಗಳಲ್ಲಿ ರಜೋಗುಣ ಪ್ರಬಲವಾಗಿರುವುದು, ಆ ದಿವಸದಲ್ಲಿ ಹೇಳಿದ ಪುರಾಣಗಳು ರಾಜಸಗಳು ಎನ್ನಿಸಿ, ನಾಲ್ಮೊಗನ ಹಿರಿಮೆಯನ್ನು ಹೇಳಿ, ಸ್ವರ್ಗಐಶ್ವರ್ಯವೇ ಮೊದಲಾದ ಮಧ್ಯಮಫಲಸಾಧನವಾಗಿರುವುದು. ಮತ್ತೆ, ಯಾವ ದಿವಸಗಳಲ್ಲಿ ತಮೋಗುಣ ಪ್ರಬಲವಾಗಿರುವುದು, ಆ ದಿವಸಗಳಲ್ಲಿ ಹೇಳಿದ ಪುರಾಣಗಳು ತಾಮಸಗಳು ಎನ್ನಿಸಿ ರುದ್ರನ ಹೆಚ್ಚಿಕೆಯನ್ನು ನುಡಿದು ಅಧೋಗತಿಗೆ ಸಾಧನವಾಗಿರುವುದು. ಆದುದರಿಂದ ನಾಲ್ಮೊಗನು ಸತ್ತ್ವೋದ್ರಿಕ್ತ ದಿವಸಗಳಲ್ಲಿ ಹೇಳಿದ ಸಾತ್ತ್ವಿಕ ಪುರಾಣಗಳು ಮುಖ್ಯ ಪ್ರಮಾಣವಾಗಿರುವುವು. ಮಿಕ್ಕ ರಾಜಸತಾಮಸ ಪುರಾಣಗಳಲ್ಲಿ ಸಾತ್ತ್ವಿಕಪುರಾಣಕ್ಕೆ ವಿರುದ್ಧವಲ್ಲದ ಅಂಶವೆಲ್ಲವೂ ಪ್ರಮಾಣವಾಗಿರುವುದು. ವಿರುದ್ಧವಾಗಿರುವ ಅಂಶವು ಸ್ವಾರ್ಥದಲ್ಲಿ ಅಪ್ರಮಾಣವಾಗಿ ಪ್ರಶಂಸಾದಿಪರವಾಗಿರುವುದು. ಈ ಮರ್ಯಾದೆಯನ್ನು

ಅರಿಯದೆ, ರಾಜಸ ತಾಮಸ ಪುರಾಣಗಳಲ್ಲಿ ಹೇಳಿದುದೆಲ್ಲವೂ ಪ್ರಮಾಣವೆಂದು ನಂಬಿ ನಡೆಯುವವರಿಗೆ ಮಧ್ಯಮಗತಿಯೂ ಅಧೋಗತಿಯೂ ಆಗುವುದೆಂದು ಮತ್ಸ್ಯಪುರಾಣದಲ್ಲಿ ಹೇಳಿತು; ಶ್ರೀ ಭಗವದ್ಗೀತೆಯಲ್ಲಿ ನೀನೂ ಹೇಳಿದೆ. ಇದರ ನೆಲೆಯನ್ನು ವಿಚಾರಿಸಲು, ಪರಮಪುರುಷಾರ್ಥವಾದ ಮೋಕ್ಷವೆಂಬುದು ಅರ್ಥಪಂಚಕ ತತ್ತ್ವಜ್ಞಾನವಿಲ್ಲದೆ ಕೂಡದು; ಆ ತತ್ತ್ವಜ್ಞಾನವು ಸಾತ್ತ್ವಿಕಶಾಸ್ತ್ರ ಪ್ರವೇಶವಿಲ್ಲದೆ ಕೂಡದು; ಆ ಸತ್ತ್ವಗುಣವು ನಿನ್ನ ಜಾಯಮಾನಕಟಾಕ್ಷವಿಲ್ಲದೆ ಕೂಡದು. ಆದುದರಿಂದ ನಿನ್ನ ಜಾಯಮಾನಕಟಾಕ್ಷವನ್ನು ಪಡೆದು, ಸಾತ್ತ್ವಿಕರಾಗಿ ಸಾತ್ತ್ವಿಕಪುರಾಣಾನುಗುಣವಾಗಿ ವೇದಾಂತಾರ್ಥವನ್ನು ನಿಶ್ಚಯ ಮಾಡುವ ಮಹಾತ್ಮರನ್ನು ನೆರೆನಂಬುವ ಸತ್ತ್ವಗುಣವನ್ನು ನನಗೆ ಪಾಲಿಸುವುದು, ಪಾಲಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಇಪ್ಪತ್ತೊಂದನೆಯ ಬಿನ್ನಹ

ಯೋಗ ಸಾಂಖ್ಯ ಪಾಶುಪತಾಗಮ ಇಪ್ಪಕ್ಕೂ ಪಾಂಚರಾತ್ರ ಹಿರಿದು ಎಂದು ಗೋವಿಂದನಲ್ಲಿ ದುರ್ಮತವಿಮರ್ದನಾದ ಅದ್ಭುತಚರಿತನು ರಾಗದಿಂದ ಉಸಿರಿದನು.

ಸರ್ವತಂತ್ರಸ್ವತಂತ್ರಾ! ತಂತ್ರಗಳು ಎಂಬುವು—ಸಾಂಖ್ಯವೂ ಯೋಗವೂ ಪಾಶುಪತವೂ ಶ್ರೀ ಪಾಂಚರಾತ್ರವೂ ಎಂಬ ಇವು. ಇವಕ್ಕೆ ಸಿದ್ಧಾಂತಗಳೆಂದೂ ಆಗಮಗಳೆಂದೂ ಹೆಸರಾಗಿರುವುದು. ಇವುಗಳಲ್ಲಿ ಸಾಂಖ್ಯತಂತ್ರವೆಂಬುದು ಈ ಇಪ್ಪತ್ತೈದು ತತ್ತ್ವಗಳ ಸ್ವರೂಪವನ್ನು ನಿರೂಪಿಸುವುದಕ್ಕಾಗಿ ಹುಟ್ಟಿರುವುದರಿಂದ, ತತ್ತ್ವನಿರೂಪಣೆ ಮಾಡುವ ಅಂಶದಲ್ಲಿ ಪ್ರಮಾಣವಾಗಿರುವುದು. ಈ ತತ್ತ್ವನಿರೂಪಣದಲ್ಲಿ ಎಲ್ಲರೂ ಪ್ರೀತಿಯಿಂದ ಪ್ರವರ್ತಿಸಬೇಕು ಎಂದು ಈ ಇಪ್ಪತ್ತೈದು ತತ್ತ್ವಗಳನ್ನು ಕೊಂಡಾಡುವ ಕೊಂಡಾಟವು ಮಿತಿಮೀರಿ, ಈ ತತ್ತ್ವಗಳಿಂದಲೇ ಜಗತ್ತು ಹುಟ್ಟುವುದು, ಬೇರೆ ಇಪ್ಪತ್ತಾರನೆಯ ತತ್ತ್ವವಾದ ಈಶ್ವರನನ್ನು ಕಂಡವರು ಯಾರು, ಎಂದು ಇವು ಮೊದಲಾಗಿ ವೇದವಿರುದ್ಧಗಳಾಗಿ ಕೆಲವು ವಚನಗಳಿರುವುವು. ಆ ಅಂಶವು ಸ್ತುತಿರೂಪ

ವಲ್ಲದೆ ಪ್ರಮಾಣವಲ್ಲ. ಯೋಗತಂತ್ರವೆಂಬುದು—ಯಮನಿಯಮಾದಿ ಯೋಗಗಳನ್ನು ನಿರೂಪಿಸುವುದಕ್ಕಾಗಿ ಹುಟ್ಟಿರುವುದರಿಂದ ಯೋಗ ನಿರೂಪಣಮಾಡುವ ಅಂಶದಲ್ಲಿ ಪ್ರಮಾಣವಾಗಿರುವುದು. ಈ ಯೋಗ ನಿರೂಪಣದಲ್ಲಿ ಎಲ್ಲರೂ ಪ್ರೀತಿಯಿಂದ ಪ್ರವರ್ತಿಸಲಾಗಿ, ಜಗದೀಶ್ವರ ನಿಗೂ ಈ ಯೋಗಪ್ರಭಾವದಿಂದಲೇ ಜಗದೀಶ್ವರತ್ತ್ವವುಂಟಾಯಿತು ಎಂಬ ಇವು ಮುಂತಾಗಿ ವೇದವಿರುದ್ಧಗಳಾಗಿ ಕೆಲವು ವಚನಗಳಿರುವುವು. ಆ ಅಂಶದಲ್ಲಿ ಸ್ತುತಿರೂಪವಲ್ಲದೆ ಪ್ರಮಾಣವಲ್ಲ. ಪಾಶುಪತವೆಂಬುದು—ಧರ್ಮ ಅರ್ಥ ಕಾಮಗಳೆಂಬ ತ್ರಿವರ್ಗ ಫಲಸಾಧನವಾದ ದೇವತಾಂತರೋಪಾಸನ ಪ್ರಕಾರವನ್ನು ನಿರೂಪಿಸುವುದಕ್ಕಾಗಿ ಹುಟ್ಟಿರುವುದರಿಂದ ಆ ದೇವತೋಪಾಸನಾ ನಿರೂಪಣ ಮಾಡುವ ಅಂಶದಲ್ಲಿ ಪ್ರಮಾಣವಾಗಿರುವುದು. ಈ ದೇವತಾಂತರ ಉಪಾಸನೆಗಳಲ್ಲಿ ಎಲ್ಲರೂ ಪ್ರೀತಿಯಿಂದ ಪ್ರವರ್ತಿಸಲ್ಕಾಗಿ, ಈ ದೇವತಾಂತರಗಳೇ ಪರತತ್ತ್ವ ಎಂದು ಇವು ಮುಂತಾಗಿ ವೇದವಿರುದ್ಧಗಳಾಗಿ ಕೆಲವು ವಚನಗಳಿರುವುವು. ಆ ಅಂಶದಲ್ಲಿ ಸ್ತುತಿ ಮಾತ್ರವೆ ಅಲ್ಲದೆ ಪ್ರಮಾಣವಲ್ಲ. ಶ್ರೀ ಪಾಂಚರಾತ್ರ ಎಂಬುದು ವೇದಾಂತ ತಾತ್ಪರ್ಯವಿಷಯವಾದ ಭಗವದುಪಾಸನಾನಿರೂಪಣಾರ್ಥವಾಗಿ ಹುಟ್ಟಿರುವುದರಿಂದ ಸರ್ವಾಂಶದಲ್ಲೂ ವೇದಾಂತಾನುಗುಣವಾಗಿ ಪ್ರಮಾಣವಾಗಿರುವುದು. ಈ ಅರ್ಥವು ಮಹಾಭಾರತದ ಶಾಂತಿಪರ್ವದಲ್ಲಿ ಸುವ್ಯಕ್ತವಾಗಿರುವುದು. ಅದು ಹೇಗೆಂದರೆ—ಮೋಕ್ಷಧರ್ಮದಲ್ಲಿ ನಿಷ್ಠಾನಿರ್ಣಯ ಅಧ್ಯಾಯದಲ್ಲಿ ವೇದಗಳೂ ಶ್ರೀ ಪಾಂಚರಾತ್ರವೂ ಸಾಂಖ್ಯವೂ ಯೋಗವೂ ಪಾಶುಪತವೂ ಎಂಬ ಈ ಪಂಚ ಸಿದ್ಧಾಂತಗಳೂ ಪರಸ್ಪರ ವಿರುದ್ಧವಾದ ತತ್ತ್ವದ ನೆಲೆಗಳನ್ನು ಪ್ರತಿಪಾದಿಸುವುವೊ? ಎಲ್ಲವೂ ಒಂದೇ ತತ್ತ್ವದ ನೆಲೆಯನ್ನು ಪ್ರತಿಪಾದಿಸುವುವೋ? ಎಂದು ಪ್ರಶ್ನಪೂರ್ವಕವಾಗಿ ವಿಚಾರಿಸಿ, ಹಲವು ದಾರಿಗಳು ಒಂದೇ ಪಟ್ಟಣವನ್ನು ಸೇರಿ ಒಂದೇ ನೆಲೆಯನ್ನು ಪಡೆಯುವಂತೆ ವೇದವೂ ಶ್ರೀ ಪಾಂಚರಾತ್ರವೂ ಮಿಕ್ಕಿನ ಮೂರು ತಂತ್ರಗಳೂ ನಿನ್ನ ಮಹಿಮೆಯನ್ನು ಪ್ರತಿಪಾದಿಸಿ, ಒಂದೇ ನೆಲೆಯನ್ನು ಪಡೆಯುವುವು ಎಂದು ನಿರ್ಣಯವಾಗಿರುವುದು. ಹೀಗೆ ತಂತ್ರಗಳು ಅಷ್ಟೂ ನಿನ್ನನ್ನು

ಪ್ರತಿಪಾದಿಸುತ್ತಾ ನಿನಗೆ ಪರತಂತ್ರವಾಗಿರುವುದರಿಂದ, ನೀನು ಸರ್ವತಂತ್ರ ಸ್ವತಂತ್ರನೆನ್ನಿಸುವೆ. ಹೀಗಿರುವ ನೀನೇ ನನಗೆ ನಿನ್ನ ನೆಲೆಯನ್ನು ತಿಳಿಸುವುದು, ತಿಳಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಇಪ್ಪತ್ತೆರಡನೆಯ ಬಿನ್ನಹ

ಪರಿಶೀಲಿಸಿದರೆ, ಒಳ್ಳನ್ನು ಅರಿವವರಿಗೆ ವಿಷಯಾವಳಿಯಲ್ಲಿ ವೈರಾಗ್ಯವು ಸುಲಭ—ಎಂದು ಶೂರರ ಪಡೆಯ ಸೂರೆಗಾರನು ಸಾರಸಭವಸನ್ನು ತನಿಗೆ ಬಿನ್ನಹ ಮಾಡಿದನು.

ಅನನ್ಯಜನಸುಲಭಾ! ಜಗತ್ತಿನಲ್ಲಿ ಮನುಷ್ಯರಲ್ಲಿ ಶಬ್ದಾದಿ ವಿಷಯಗಳನ್ನು ಬಿಟ್ಟು ನಿನ್ನನ್ನೇ ನೆರೆನಂಬಿದವರಿಗೆ ನೀನು ಸುಲಭನೆಂದು ತಿಳಿದ ಮಹಾತ್ಮರು ನಿನ್ನ ಅಡಿಗಳನ್ನು ಸಮೀಪಿಸಿ ತಮ್ಮ ಭಾರವನ್ನು ಇಳಿಸಿ ಸುಖದಲ್ಲಿರುವರು. ಮತ್ತೆ ಕೆಲವರು ಪಂಡಿತಂಮನ್ಯರು ಶರೀರವಿರುವವರೆಗೂ ವಿಷಯಗಳನ್ನು ಬಿಡಲು ಆಗದುದರಿಂದ ನಿನ್ನ ಭಜನೆ ದುರ್ಘಟವೆಂಬರು. ಅವರು ಹೇಳುವ ಕುಯುಕ್ತಿಗಳು ಕೆಲವು ಉಂಟು. ಅದು ಹೇಗೆಂದರೆ—ವಿಷಯಗಳನ್ನು ಪರಿತ್ಯಜಿಸುವುದು ಎಂಬುದು ಎರಡು ತೆರ. ವಿಷಯಗಳಷ್ಟನ್ನೂ ನಾಶಮಾಡುವುದು ಒಂದು, ಅಲ್ಲದಿದ್ದರೆ ವಿಷಯಗಳು ಇದ್ದರೂ ಅವುಗಳನ್ನು ಸೋಂಕದಿರುವುದು ಒಂದು. ಇದರಲ್ಲಿ ನೀನು ಉಂಟುಮಾಡಿದ ವಿಷಯಗಳು ಅಷ್ಟನ್ನೂ ನಾಶಮಾಡಿದರೆ, ನಿನ್ನ ಒಡವೆಗಳನ್ನು ಕೆಡಿಸಿದ ಸ್ವಾಮಿದ್ರೋಹ ಬರುವುದು. ವಿಷಯಗಳ ಸೋಂಕು ಇಲ್ಲದಿರುವೆವೆಂದರೆ ಈ ಪ್ರಕೃತಿಮಂಡಲವನ್ನು ಬಿಟ್ಟು ಹೋಗದಿರುವುದರಿಂದಲೇ ಶಕ್ಯವಲ್ಲ. ಊರಲ್ಲಿರುವ ವನಿತಾದಿ ವಿಷಯವನ್ನು ಬಿಟ್ಟು ವನದಲ್ಲಿದ್ದರೂ, ನೀರಲ್ಲಿ ಮುಳುಗಿದ್ದರೂ, ಆದಿಭರತನಂತೆಯೂ ಸೌಭರಿಯಂತೆಯೂ ಜಿಂಕೆಯ ಮರಿ, ಮೀನು ಮೊದಲಾದ ವಿಷಯಗಳಲ್ಲಿ ಸಂಸಾರ ಸಂಬಂಧವನ್ನು ಉಂಟುಮಾಡದೆ ಬಿಡವು. ಅದರಿಂದ ವಿಷಯತ್ಯಾಗವು ಅಶಕ್ಯ ಎನ್ನುವರು. ಇವರು ಒಮ್ಮೆಯೂ ವೇದಾಂತವನ್ನು ತಿಳಿದ ಹಿರಿಯರ ಅಡಿನೆರಳಿನಲ್ಲಿ ಇದ್ದು ಹೊತ್ತು

ಕಳಿದವರಲ್ಲ. ಹಿರಿಯರ ಉಪದೇಶದಿಂದ ತಿಳಿದರೆ ವಿಷಯಪರಿತ್ಯಾಗವು ಅತ್ಯಂತ ಸುಲಭವಾಗಿರುವುದು. ಅದು ಹೇಗೆಂದರೆ—ಆಳು ಒಬ್ಬನು ಅರಸನನ್ನು ಎಣಿಸದೆ, ಅವನ ಭಂಡಾರಕ್ಕೆ ಸಲ್ಲುವ ನಾಡು ಬೀಡು ಗಳಲ್ಲಿರುವ ಒಡವೆಗಳನ್ನು ತನಗೆಂದು ಗಳಿಸಿ, ತನ್ನ ಇಚ್ಛೆ ಬಂದಂತೆ ವ್ಯಯಮಾಡಿ ಕೆಡಿಸಿದರೆ, ಅವನು ಆಸೆಗನೂ ಸ್ವಾಮಿದ್ರೋಹಿಯೂ ಆಗುವನು. ಹಾಗಲ್ಲದೆ, ತಾನು ಆಳು ಎಂಬ ನೆನಪು ಕೂಡಿ, ಅವನ ಸೇವೆಗೆಂದು ಒಡವೆಗಳನ್ನು ಸಂಪಾದಿಸಿದುದು ಎಲ್ಲವನ್ನೂ ಅಂದಂದಿಗೆ ಒಪ್ಪಿಸಿ, ಅವನು ಆರೋಗಣೆಮಾಡಿ ಉಳಿದ ಅಮೃತಾನ್ನವನ್ನು ಉಂಡು, ಅವನು ಉಟ್ಟು ತೊಟ್ಟು ಕಳೆದು ಕೊಟ್ಟ ಒಡವೆ ಉಡಿಗೆಗಳನ್ನು ಧರಿಸಿ, ಸಂಪತ್ತಿನಿಂದ ಮೆರೆದರೂ ನಿಃಸ್ಪೃಹನೂ ವಿಶ್ವಾಸಿಯೂ ಎನ್ನಿಸುವನು. ಹಾಗೆ, ನಿನ್ನ ಊಳಿಗವೆನ್ನಿಸಿದ ತನ್ನ ಸ್ವರೂಪವನ್ನು ತಿಳಿಯದೆ, ತಾನು ಸ್ವತಂತ್ರನೆಂಬ ಅಜ್ಞಾನದಿಂದ ತನ್ನ ಭೋಗಾರ್ಥವಾಗಿ ವಿಷಯಗಳನ್ನು ಅನುಭವಿಸುವವನಿಗೆ ವಿಷಯತ್ಯಾಗವೂ ನಿನ್ನ ಭಕ್ತಿಯೂ ಕೂಡದು. ಹಾಗಲ್ಲದೆ, ತಾನು ನಿನಗೆ ಆಳು ಎನಿಸುವ ನೆನಪು ಉಂಟಾಗಿ, ವರ್ಣಾಶ್ರಮಧರ್ಮಗಳು ಎನಿಸುವ ನಿನ್ನ ಊಳಿಗಗಳಲ್ಲಿ ಶಕ್ತಿವಂಚನೆಯಿಲ್ಲದೆ ನಡೆದು, ವೇದಶಾಸ್ತ್ರಗಳೆಂಬ ನಿರೂಪಸಹವಾಗಿ ನೀನು ಕರುಣಿಸಿದ ವಿಷಯಗಳನ್ನು ಅನುಭವಿಸಿದರೆ, ಅದು ಕೂಡ ನಿನ್ನ ಊಳಿಗಗಳೇ ಅಲ್ಲದೆ ವಿಷಯಾಸಕ್ತಿಯಲ್ಲ. ಹೀಗೆ ನಡೆದ ವಸಿಷ್ಠ ವಿಶ್ವಾಮಿತ್ರರು ಗೃಹಸ್ಥಾಶ್ರಮದಲ್ಲಿ ಇದ್ದೂ ನಿತ್ಯಬ್ರಹ್ಮಚಾರಿಯೂ ನಿತ್ಯ ಉಪವಾಸಿಯೂ ಎನ್ನಿಸಿದರು. ಆದರಿಂದ ನೀನು ಅವರಿಗೆ ಸುಲಭವೆನ್ನಿಸುವುದು. ವಿಷಯ ವಿರಕ್ತಿಯನ್ನು ಕೊಟ್ಟು, ನಿನ್ನ ಭಕ್ತಿಯನ್ನು ನನಗೆ ಕೊಡುವುದು, ಕೊಡುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಇಪ್ಪತ್ತುಮೂರನೆಯ ಬಿನ್ನಹ

ಬಲ್ಲವರ ಮತದ ಪ್ರಕಾರ, ಮುಕ್ತಿಮಾರ್ಗಕ್ಕೆ ಕೇವಲ ಕರ್ಮ ಸಲ್ಲದು— ಎಂಬ ಆ ಬಲ್ಲರ ಬಲ್ಲಹನು ಒಲವಿನಿಂದ ಮೆಲ್ಲಡಿಗಳಲ್ಲಿ ಮಣಿದು ಹರಿಗೆ ಬಿನ್ನಹ ಮಾಡಿದನು.

ಸಕಲಕರ್ಮಫಲಪ್ರದಾ! ಕರ್ಮ ಎಂಬುದು ಮನುಷ್ಯರು ಮಾಡುವ ಕೆಲಸ. ಅದು ಸತ್ಕರ್ಮವೆಂದೂ ದುಷ್ಕರ್ಮವೆಂದೂ ಎರಡು ತೆರ. ಸತ್ಕರ್ಮವೆಂಬುದು ನಿನ್ನ ನಿರೂಪವಾದ ವೇದಶಾಸ್ತ್ರಗಳಲ್ಲಿ ಹೊಗಳಿಕೆ ಪಡೆದ ನಡತೆ. ದುಷ್ಕರ್ಮವೆಂಬುದು ಅದರಲ್ಲಿ ಅಲ್ಲಗಳೆದ ನಡತೆ. ಸತ್ಕರ್ಮದಿಂದ ಪುಣ್ಯವೂ ದುಷ್ಕರ್ಮದಿಂದ ಪಾಪವೂ ಆಗುವುದು. ಪುಣ್ಯವೆಂಬುವುದು ನಿನ್ನ ಒಲುಮೆ; ಪಾಪ ಎಂಬುದು ನಿನ್ನ ಮುನಿಸು. ಪುಣ್ಯದಿಂದ ಸುಖವೂ ಪಾಪದಿಂದ ದುಃಖವೂ ಆಗುವುದು. ಆ ಸತ್ಕರ್ಮವೂ ನಿತ್ಯವೆಂದೂ ಕಾಮ್ಯವೆಂದೂ ಎರಡು ತೆರ. ನಿತ್ಯವೆಂಬುದು ಈ ವರ್ಣದವರು ಈ ಆಶ್ರಮದವರು ಇದನ್ನು ನಡೆಯುವುದು, ಇದನ್ನು ಬಿಡುವುದು, ಎಂದು ನೀನು ಸ್ವರುಚಿಯಿಂದ ಆಜ್ಞೆಮಾಡಿದ ಕಾರ್ಯ. ಇದನ್ನು ನಿನ್ನ ಭಕ್ತರು ನೀನು ಸರ್ವಜ್ಞನೂ ಸರ್ವಶಕ್ತಿಯೂ ಭಕ್ತವತ್ಸಲನೂ ಎಂದು ನಿನ್ನನ್ನೆ ನೆರೆನಂಬಿ, ನಿನ್ನ ಗುಣಗಳಿಗೆ ಮಾರುಹೋಗಿ, ನಿನ್ನ ಆಜ್ಞೆಯನ್ನು ಹಿಡಿದು, ನಿನ್ನ ಊಳಿಗ ಮಾಡುವುದೇ ಸ್ವಯಂಫಲವೆಂದು ಕೆಲಸಮಾಡಿ ಮೋಕ್ಷವನ್ನು ಪಡೆಯುವರು. ಕಾಮ್ಯವೆನ್ನುವುದು ನಿನ್ನ ಮನಸ್ಸು ಬಾರದಿದ್ದರೂ ಅವರವರು ಆಸೆಪಡುವ ನಿರ್ಬಂಧದಿಂದ ಈ ಫಲವನ್ನು ಆಶಿಸಿದವನು ಈ ಕರ್ಮವನ್ನು ಮಾಡುವುದೆಂದು ಉದಾಸೀನ ಬುದ್ಧಿಯಿಂದ ನೀನು ಕಟ್ಟು ಮಾಡಿದುದು. ಫಲದಾಸೆಯಿಂದ ಈ ಕಾಮ್ಯಕರ್ಮಗಳನ್ನು ಸಾಂಗವಾಗಿ ಆಚರಿಸಿದವರಿಗೆ ಇಹದಲ್ಲಿ ಪೃಥ್ವೀಪತಿತ್ವ ಪರ್ಯಂತವಾದ ಐಶ್ವರ್ಯವೂ ಪರದಲ್ಲಿ ಸತ್ಯಲೋಕಾಧಿಪತ್ಯ ಪರ್ಯಂತವಾದ ಐಶ್ವರ್ಯವೂ ಎಂಬುದು. ದುಷ್ಕರ್ಮ ಎಂಬುದು ನೀನು ನಿರೂಪಿಸಿದುದನ್ನು ಬಿಡುವುದೂ ನೀನು ಅಲ್ಲಗಳೆದುದನ್ನು ನಡೆವುದೂ ಎಂಬ ಎರಡು ತೆರ. ಇದರಿಂದ ಇಹದಲ್ಲಿ ಚಿತ್ರವಧೆ ಕೊನೆಯಾದ ದುಃಖವೂ ಪರದಲ್ಲಿ ಮಹಾನರಕಪಾತ ಕೊನೆಯಾದ ಯಾತನೆಯೂ ಆಗುವುದು ಎಂದು ವೇದಾಂತವನ್ನು ತಿಳಿದವರಾದ ಹಿರಿಯರಿಂದ ಕೇಳಿ ತಿಳಿದೆನು. ಇದರ ನೆಲೆಯನ್ನು ವಿಚಾರಿಸಲು ಕಾಮ್ಯಕರ್ಮವೂ ದುಷ್ಕರ್ಮವೂ ನಿನ್ನ ಮನಸ್ಸಿಗೆ ಬಾರದಿರುವುದರಿಂದ ನಿನ್ನ ಅಡಿಯನ್ನು ಸೇರಲೀಸದೆ ಸಂಸಾರವೆಂಬ

ಸೆರೆಮನೆಯಲ್ಲಿ ಕೆಡಹಿ ಕಾಲು ತೊಡಕಾಗಿರುವುದರಿಂದ ಚಿನ್ನದ ಕಬ್ಬಿಣದ ಸಂಕಲೆಗಳ ಹಾಗಿರುವುವು. ಆದರಿಂದ ಈ ಎರಡೂ ತೆರದ ಬಂಧಕ್ಕೆ ಸಿಕ್ಕದೆ ನಿನ್ನನ್ನೆ ನೆರೆನಂಬಿ ನೀನು ಒಲಿದು ನಿರೂಪಿಸಿದ ಊಳಿಗವನ್ನು ಸಂತೋಷದಿಂದ ಮಾಡಿ, ನಿನ್ನ ಮನ್ನಣೆಯನ್ನು ಪಡೆಯುವ ಸಯ್ಪನ್ನು ನನಗೆ ಪಾಲಿಸುವುದು, ಪಾಲಿಸುವುದು, ಅನನ್ಯಜನಸುಲಭ, ಶ್ರೀ ಯದು ಶೈಲವಲ್ಲಭಾ !

## ಇಪ್ಪತ್ತುನಾಲ್ಕನೆಯ ಬಿನ್ನಹ

ಇತರವಾದುದನ್ನು ಔದಾಸೀನ್ಯ ಮಾಡುವದರಿಂದ ನೀನು ಆದರದಿಂದ ಮುಕ್ತಿ ಪದವನ್ನು ಕೊಡುವೆ—ಎಂದು ಆ ದೇವದೇವನ ಅಂಘ್ರಿಗೆ ಯಾದವನಾರಾಯ ಣಾಂಕನು ಒಲವಿನಿಂದ ಒರೆದನು.

ಸರ್ವಾಭೀಷ್ಟಪ್ರದಾ! ಜೀವಾತ್ಮರು ಪ್ರಕೃತಿಯಲ್ಲಿ ಹುದುಗಿರುವುದರಿಂದ ತಮ್ಮ ತಮ್ಮ ಸ್ವರೂಪವನ್ನು ಮರೆತು, ತಾವು ಸ್ವತಂತ್ರರೆಂದೆಣಿಸಿ, ದೇಹವೇ ತಾವೆಂದು ಭ್ರಮಿಸುವರು. ಈ ಅಜ್ಞಾನವು ಅವಿದ್ಯೆ ಎನಿಸುವುದು. ತಾವು ಸ್ವತಂತ್ರರೆಂಬುದರಿಂದ ತಮ್ಮ ತಮ್ಮ ಹಿತಮಾಡುವೆವೆಂದು ಕಾರ್ಯಾಕಾರ್ಯವನ್ನು ಅರಿಯದೆ ತಮ್ಮ ಇಚ್ಛೆ ಬಂದಂತೆ ನಡೆಯುವರು; ಅದು ಕರ್ಮವೆನಿಸುವುದು. ಆ ಕರ್ಮವೂ ಯಜ್ಞ ದಾನ ತಪಸ್ಸು ಮೊದಲಾದ ಸತ್ಕರ್ಮವೆಂದೂ ಅಕೃತಕರಣ ಕೃತ್ಯಾಕರಣ ಮೊದಲಾದ ಪಾಪಕರ್ಮವೆಂದೂ ಎರಡು ರಾಶಿಯಾಗಿರುವುದು. ಹೀಗೆ ಹಲವಾರು ತೆರನಾದ ಕರ್ಮಗಳಲ್ಲಿ ಯಾವನು ಹಲವು ಕರ್ಮವನ್ನು ಆಚರಿಸುತ್ತಿರುವನೋ ಆತನಿಗೆ ಕರ್ಮದಲ್ಲಿ ಅಭ್ಯಾಸವಾಗುವುದರಿಂದ, ತಾನು ನಡೆಯಬೇಕು ಎಂಬುದಕ್ಕೆ ನೆನಪಿಲ್ಲದೆ ಮರೆದಿದ್ದಾಗಲೂ ತಾನು ಅರಿಯದ ಹಾಗೆ ಮೊದಲು ನಡೆದ ಕರ್ಮದಲ್ಲಿ ಪ್ರವೃತ್ತಿ ಹುಟ್ಟುವುದು; ಇದು ವಾಸನೆ ಎನಿಸುವುದು. ಮತ್ತೆ, ತಾನು ನಡೆದ ಕರ್ಮದಲ್ಲಿ ಮತ್ತೆಯೂ ಮತ್ತೆ ನಾನು ಮಾಡುವೆನೆಂಬ ಪ್ರೀತಿ ಹುಟ್ಟುವುದು; ಇದು ರುಚಿ ಎನಿಸುವುದು. ಹೀಗೆ ರುಚಿಕೂಡಿ ನಡೆದವರು ಆ ಕರ್ಮದ ಫಲವನ್ನು ಭುಜಿಸುವುದಕ್ಕೆ ಅನುಗುಣವಾಗಿ ನೀನು

ಕೊಟ್ಟ ದೇವಮನುಷ್ಯಾದಿ ಶರೀರದಲ್ಲಿ ಪ್ರವೇಶಿಸುವರು. ಇದು ಪ್ರಕೃತಿ ಸಂಬಂಧವನ್ನು ಕೊಡುವುದು. ಹೀಗೆ ಶರೀರಾತ್ಮಭ್ರಮ ಮೊದಲಾದ ಅವಿದ್ಯೆಯೂ ಆ ಭ್ರಮದಿಂದ ನಡೆಯುವ ನಡತೆಯೆನಿಸುವ ಕರ್ಮವೂ ಆ ನಡತೆ ಒಡಂಬಟ್ಟು ತಾನು ಅರಿಯದೆಯೆ ಯಾವಾಗಲೂ ಪ್ರವರ್ತಿಸುವ ವಾಸನೆಯೂ ಆ ನಡತೆಯಲ್ಲಿ ಪ್ರೀತಿಯೆಂಬ ರುಚಿಯೂ ಆ ರುಚಿಯೊಡನೆ ನಡೆದ ಕರ್ಮಫಲವಾದ ಶರೀರಸಂಬಂಧವೂ ಜನ್ಮಜನ್ಮದಲ್ಲಿ ಮರಳಿ ಮರಳಿ ಬರುವುದರಿಂದ ಇದೇ ಸಂಸಾರಚಕ್ರವೆನಿಸುವುದು. ಈ ಸಂಸಾರಚಕ್ರದಲ್ಲಿ ಭ್ರಮಣೆಗೊಳ್ಳುವ ಜೀವಾತ್ಮರು ತಮ್ಮ ತಮ್ಮ ನಡತೆಗಳಿಂದ ಸ್ವರೂಪ ಅಳಿಯದ ಹಾಗೆ ನೀನು ಅವರಲ್ಲಿ ದಯೆಮಾಡಿ, ಸುಖದುಃಖಾನುಭವದಿಂದ ಅವರ ಕರ್ಮಗಳನ್ನು ಕಳೆಯುತ್ತಾ, ಒಮ್ಮೆ ನಿನ್ನನ್ನು ಪೂಜಿಸಿ ಮುಕ್ತಿಯನ್ನು ಪಡೆಯಲು ಅನುಗುಣವಾದ ಮನುಷ್ಯಶರೀರವನ್ನು ಉಂಟುಮಾಡುವುದರಿಂದ ನೀನು ಸಂಸಾರಿಗಳಲ್ಲಿ ದಯೆಯುಳ್ಳವನು ಎಂಬುದು. ಹೀಗಿರುವ ಸಂಸಾರಿಗಳಲ್ಲಿ ಕೆಲವರಿಗೆ ವೈರಾಗ್ಯವೂ ಹುಟ್ಟಿ ಮುಮುಕ್ಷುಗಳು ಎನಿಸಲು, ಅವರಿಗೆ ಮೋಕ್ಷೋಪಾಯವನ್ನು ಅನುಗೊಳಿಸುವುದರಿಂದ ನೀನು ಮುಮುಕ್ಷುಗಳಲ್ಲಿ ದಯೆಯುಳ್ಳವನು ಎನಿಸುವುದು. ನಿತ್ಯಮುಕ್ತರಿಗೂ, ಮೋಕ್ಷವನ್ನು ಪಡೆದವರಿಗೂ ನಿರವಧಿಕಾನಂದವನ್ನು ಎಡೆಬಿಡದೆ ಬಳೆಯಿಸುವುದರಿಂದ ಮುಕ್ತರಲ್ಲೂ ದಯಾಳು ಎನ್ನುವುದು. ಹೀಗೆ ಸರ್ವಸಮನೆನ್ನಿಸುವ ನೀನು ನಿನ್ನ ದಯಾಮೃತಾಂಬುಧಿಯ ತರಂಗದಿಂದ ನನ್ನ ಕೆಟ್ಟ ಕೆಲಸಗಳೆಂಬ ಕರ್ಮವನ್ನು ಕಳೆದು ನಿನ್ನ ಆಳ್ತನವೆಂಬ ಪೊಗರನ್ನು ಹೊಮ್ಮಿಸುವುದು, ಹೊಮ್ಮಿಸುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಇಪ್ಪತ್ತೈದನೆಯ ಬಿನ್ನಹ

ಹಲರೀತಿಯಲ್ಲಿ ಫಲವಾಗುವುದು ನಿನ್ನಿಂದಲೇ, ಬೇರೆ ಕಾರಣದಿಂದಲ್ಲ, 'ಇದು ದಿಟ—ಎಂದು ಸತ್ಯಪರಾಕ್ರಮನು ಅಲಸದೆ ಕಲ್ಯಾಣಶೀರ್ಷನಿಲಯನ ಪದದಲ್ಲಿ ನಲವಿಂದ ಒರೆದನು.

ಪ್ರಪನ್ನಜನಪರಿಪಾಲಕಾ! ಪಾಲನವೆಂದರೆ ಯೋಗಕ್ಷೇಮಗಳನ್ನು ಹೊತ್ತು ಮಾಡುವುದು. ಯೋಗ ಎಂದರೆ ಮೊದಲು ಪಡೆಯದ ಶ್ರೇಯಸ್ಸನ್ನು ಒಡಗೂಡಿಸುವುದು ಕ್ಷೇಮ ಎಂದರೆ—ಮೊದಲೇ ಇರುವ ಶ್ರೇಯಸ್ಸುಗಳನ್ನು ಕಾಪಾಡುವುದು. ಈ ಎರಡಕ್ಕೂ ನೀನೇ ಸ್ವತಂತ್ರ ಕರ್ತೃ; ಉಳಿದ ಕಾರಣಗಳೆಲ್ಲವೂ ನಿನ್ನ ಅಧೀನವೆನ್ನಿಸಿದ ಉಪಕರಣ ಗಳು. ಈ ನೆಲೆಯನ್ನು ಅರಿಯದೆ ಕೆಲವರು ಶಾಸ್ತ್ರತಾತ್ಪರ್ಯದಲ್ಲಿ ಭ್ರಮಿಸುವರು. ಅವರಲ್ಲಿ ಕೇವಲ ಕರ್ಮಠರು ಕರ್ಮದಿಂದಲೇ ಫಲ ವೆಂದೂ, ದೇವತಾಂತರ ಪರಾರಾಧ್ಯರು ದೇವತಾಂತರದಿಂದಲೇ ಎಂದೂ ಜ್ಯೋತಿರ್ವಿದರು ಗ್ರಹಾನುಕೂಲ್ಯ ಹೊಂದಿದ ಕಾಲದಿಂದಲೇ ಎಂದೂ ಲೌಕಿಕರು ಪುರುಷಪ್ರಯತ್ನದಿಂದಲೇ ಎಂದೂ ನಾಸ್ತಿಕರು ಕಾರಣ ವೊಂದೂ ಇಲ್ಲದೆ ತನ್ನಿಂದ ತಾನೇ ಎಂದೂ ಹೇಳುವರು. ಈ ಪಕ್ಷ ಗಳಷ್ಟೂ ಯುಕ್ತಿವಿರುದ್ಧಗಳು. ಅದು ಹೇಗೆಂದರೆ—ಕರ್ಮವೆಂಬುದು ತಾನು ನಡೆವ ನಡತೆ. ಅದು ಅಚೇತನವಾಗಿರುವುದರಿಂದ ಪುರುಷನು ಬಯಸಿದ ಫಲವನ್ನು ತಿಳಿದು ಮಾಡಲು ತಿಳಿಯದು. ದೇವತಾಂತರವೂ ಚೇತನವಾದರೂ ತನ್ನ ಯೋಗಕ್ಷೇಮಕ್ಕೂ ನಿನ್ನನ್ನು ಬಯಸುವುದರಿಂದ, ಸ್ವಾತಂತ್ರ್ಯದಿಂದ ಫಲವಿಲ್ಲ. ಪುರುಷಪ್ರಯತ್ನವೆ ಫಲಸಾಧಕವಾದರೆ ಕಾರಣವೊಂದೂ ಇಲ್ಲದಿದ್ದರೂ ಯಾವಾಗಲೂ ಅಷ್ಟು ಜನರಿಗೂ ಅಷ್ಟೂ ಫಲವಾಗಬೇಕು. ಅದರಿಂದ ಒಂದೂ ಫಲಪ್ರದಗಳಲ್ಲ. ಮತ್ತೆ ಜಗತ್ತಿ ನಲ್ಲಿ ಆಳುಗಳನ್ನು ಕಾಪಾಡುವ ಅರಸನಿಗೆ ಆಳುಗಳು ಮಾಡುವ ಊಳಿಗ ದಂತೆ—ಕರ್ಮ; ಆಳುಮಾಡಿದ ಊಳಿಗವನ್ನು ಅರಸನಿಗೂ ಅರಸನು ಕೊಟ್ಟ ಜೀವನವನ್ನು ಆಳಿಗೂ ಒಪ್ಪಿಸುವ ಸೇರುವೆಗಾರನಂತೆ—ದೇವ ತಾಂತರಗಳು; ಜೀವಿತವನ್ನು ಕೊಡುವುದಕ್ಕೆ ಮಿತಿಮಾಡಿದ ಹಗಲಿ ನಂತೆ—ಕಾಲ; ಅರಸನ ಊಳಿಗದಲ್ಲಿ ಕೈಕಾಲುಗಳನ್ನಾಡಿಸುವಂತೆ— ಪುರುಷಪ್ರಯತ್ನ; ಒಡೆಯನ ಒಲವನ್ನು ಅರಿಯದ ಮರುಳು ಊಳಿಗ ದವನಂತೆ—ತನ್ನಿಂದ ತಾನೆ ಫಲ ಎಂಬುದು. ಹೀಗಿರಲು, ತಾನು ಮಾಡುವ ಊಳಿಗದಿಂದಲೇ ಬದುಕುವೆನೆಂದೂ, ಸೇರುವೆಗಾರನಿಂದಲೇ ಬಾಳುವೆನೆಂದೂ ಮಿತಿಮಾಡಿದ ದಿನ ಬಂದರೆ ಸಂಬಳ ಬರುವುದೆಂದೂ

ವಿಷಯಗಳನ್ನು ನೋಕಿ ತನ್ನ ಬೆವರಿನ ಸೊಮ್ಮಿನಿಂದಲೇ ತಾನು ಹೆಚ್ಚುವೆ ನೆಂದೂ ಆಕಸ್ಮಿಕವಾಗಿ ಪೆಂಪುಪಡೆದಿರುವೆನೆಂದೂ ಎಣಿಸುವವರು ಒಡೆಯನ ಊಳಿಗದಲ್ಲಿ ನೆಲೆನಿಂದು ಕಡೆಹಾಯಲು ಅರಿಯರು. ಆದರಿಂದ ಈ ಭ್ರಾಂತಿಗಳನ್ನು ಬಿಟ್ಟು, ನಿನ್ನಿಂದಲೇ ಬದುಕುವೆನೆಂದು ನಿನ್ನನ್ನು ನೆರೆನಂಬಿದವರು ಎಂತಹವರಾದರೂ ಅವರ ಯೋಗಕ್ಷೇಮಗಳನ್ನು ಹೊತ್ತು ಮಾಡುವೆನೆಂದು ನೀನು ಮೊದಲು ಅರ್ಜುನನಿಗೆ ಹೇಳಿದುದನ್ನು ಮರೆಯದೆ, ಈಗ ನನ್ನನ್ನು ಪಾಲಿಸುವುದು, ಪಾಲಿಸುವುದು, ಅನನ್ಯ ಜನಸುಲಭ, ಶ್ರೀ ಯದುಶೈಲವಲ್ಲಭಾ!

## ಇಪ್ಪತ್ತಾರನೆಯ ಬಿನ್ನಹ

ಸರ್ವರನ್ನೂ ಕಾಪಾಡುವವನು ನೀನೊಬ್ಬನೇ, ಬೇರೆ ಯಾರೂ ಸಮರ್ಥರಲ್ಲ — ಎಂದು, ನೀರುಹೂವನ್ನು ಬಸಿರಲ್ಲಿ ಉಳ್ಳವನ ಪಾದಕ್ಕೆ ಹಿರಿಯ ಪಗೆಗಳ ದಳಕ್ಕೆ ಬೇಟೆಕಾರನಾದವನು ಆದರದಿಂದ ಒರೆದನು.

ಸರ್ವರಕ್ಷಕಾ! ನೀನೊಬ್ಬನೇ ಅಷ್ಟರನ್ನೂ ಸಲಹುವವನು. ನೀನಲ್ಲದೆ ಉಳಿದ ದೇವತಾಂತರಗಳೂ ತಂದೆ ಮೊದಲಾದ ಬಂಧುಗಳೂ ಧನಧಾನ್ಯಾದಿವಿಭವಗಳೂ ರಕ್ಷಕರಲ್ಲ. ಅದು ಹೇಗೆಂದರೆ—ನಾಲ್ಮೊಗನು ರಕ್ಷಕನಲ್ಲ ಎಂಬುದು ತನ್ನ ತಲೆಯನ್ನು ನೀಗಾಡಿದುದಲ್ಲದೆ ವೇದಾಪಹರಣದಲ್ಲಿ ಮುಂದುಗಾಣದೆ ಮೋಸಹೋದುದರಿಂದ ತಿಳಿಯಿತು. ರುದ್ರನೂ ರಕ್ಷಕನಲ್ಲ ಎಂಬುದು ವೃಕಾಸುರ ವರ ಪ್ರದಾನದಲ್ಲಿ ಭ್ರಮಣೆಗೊಂಡು ಭಂಗಪಟ್ಟುದಲ್ಲದೆಯೂ ಕೈದು ಹಿಡಿದು ಕಾದಿದ್ದೂ ತನ್ನದಿರಲ್ಲಿ ತೋಳುಗಳನ್ನು ಕಿತ್ತು ಅರಚುವ ಬಾಣಾಸುರನನ್ನು ಬಿಟ್ಟು ಹರಿದೋಡಿದುದರಲ್ಲಿ ತಿಳಿಯಿತು. ಇಂದ್ರಾದಿದೇವತೆಗಳೂ ರಕ್ಷಕರಲ್ಲ ಎಂಬುದು ಹಿರಣ್ಯಾಕ ಬಲಿ ವೃತ್ರಾಸುರಾದಿ ಉಪದ್ರವಗಳಿಂದ ತಮ್ಮ ತಮ್ಮ ಬೀಡುಗಳನ್ನು ಬಿಟ್ಟು ಹರಿದೋಡಿದುದರಲ್ಲಿ ತಿಳಿಯಿತು. ತಂದೆಯೂ ರಕ್ಷಕನಲ್ಲ ಎಂಬುದು ಹಿರಣ್ಯಕಶಿಪುವಿನಲ್ಲಿ ತಿಳಿಯಿತು. ಒಡಹುಟ್ಟಿದವರೂ ರಕ್ಷಕರಲ್ಲ ಎಂಬುದು ವಾಲಿಯಲ್ಲಿ ತಿಳಿಯಿತು. ಮಕ್ಕಳೂ ರಕ್ಷಕರಲ್ಲ ಎಂಬುದು ಕಂಸನಲ್ಲಿ ತಿಳಿಯಿತು. ಗಂಡಂದಿರೂ

ರಕ್ಷಕರಲ್ಲ ಎಂಬುದು ಪಾಂಡವರಲ್ಲಿ ತಿಳಿಯಿತು. ಧನಧಾನ್ಯಾದಿ ವಿಭವಗಳೂ ರಕ್ಷಕರಲ್ಲ ಎಂಬುದು ದಾಯಾದಿಗಳು ಹಗೆವರು ಕೊಳ್ಳಿಕಳ್ಳರು ಹಳ್ಳ ಮೊದಲಾದುದರಿಂದ ನಾಶವಾಗಿ ಹೋಗುವುದರಲ್ಲಿ ತಿಳಿಯಿತು. ಹೀಗೆ ತಾವು ರಕ್ಷಕರಲ್ಲದಿದ್ದರೂ ಅಲ್ಪ ಬುದ್ಧಿಗಳಿಗೆ ರಕ್ಷಕಗಳಂತೆ ತೋರಿ ಮೋಸ ಮಾಡುವುದರಿಂದ ರಕ್ಷಾಕಾಭಾಸಗಳು ಎನ್ನಿಸುವುವು. ಹಾಗಲ್ಲದೆ ನೀನು ನಾಲ್ಮೊಗನಿಗೆ ವೇದವನ್ನು ತಂದುಕೊಟ್ಟು ರುದ್ರನಿಗೆ ವೃಕಾದಿ ಉಪದ್ರವಗಳನ್ನು ಪರಿಹರಿಸಿಯೂ ಇಂದ್ರಾದಿಗಳಿಗೆ ದಾನವೇಂದ್ರರನ್ನು ಗೆದ್ದು ತಂತಮ್ಮ ಅಧಿಕಾರಗಳಲ್ಲಿ ನೆಲಸಿಯೂ ಪ್ರಹ್ಲಾದನಿಗೆ ಅಭಯವನ್ನು, ಸುಗ್ರೀವನಿಗೆ ರಾಜ್ಯವನ್ನು, ಉಗ್ರಸೇನನಿಗೆ ಅರಸುತನವನ್ನು, ದ್ರೌಪದಿಗೆ ಅಭಿಮಾನರಕ್ಷೆಯನ್ನು ಉಂಟುಮಾಡಿ ಸರ್ವರಕ್ಷಕನೆನಿಸಿ ಪ್ರಸಿದ್ಧನಾದ ನಿನ್ನನ್ನು ಮರೆಹೊಕ್ಕು ನಿನ್ನ ಮೆಲ್ಲಡಿಗಳೇ ಉಪಾಯ ಉಪೇಯಗಳೆಂದು ನೆರೆನಂಬಿ, ಬೇರೆ ಎಲ್ಲವನ್ನು ತೊರೆದು ಅನನ್ಯಗತಿ ಎನಿಸಿದ ನನ್ನನ್ನು ರಕ್ಷಿಸುವುದು, ರಕ್ಷಿಸುವುದು, ಅನನ್ಯಜನ ಸುಲಭ, ಶ್ರೀ ಯದುಶೈಲವಲ್ಲಭಾ!

## ಇಪ್ಪತ್ತೇಳನೆಯ ಬಿನ್ನಹ

ತನ್ನ ಇರವಿನಿಂದ ತಾನು ಅಳುಕದೆ, ನಿನ್ನ ಇರವಿನಿಂದ ತಿಳಿವನ್ನು ಅಳತೆಮಾಡಿಕೊಳ್ಳುವನು, ಇದು ದಿಟ— ಎಂದು ಮುನ್ನೆಯ ಬಲ್ಲಗೆಯ ಬಂದಿಕಾರನು ನಲವಿನಿಂದ ಉನ್ನತಮಹಿಮನಿಗೆ ಒರೆದನು.

ಅಖಿಲಲೋಕಶರಣ್ಯಾ! ನೀನು ಮರೆಹೊಕ್ಕವರ ಎಡರನ್ನು ಕಳೆದು ಅವರ ಅಭೀಷ್ಟವನ್ನು ಸಲ್ಲಿಸುವವನು. ಸಕಲವನ್ನು ತಿಳಿಯುವುದಕ್ಕೆ ಸರ್ವಜ್ಞನೂ, ತಿಳಿದಂತೆ ಮಾಡಿ ನಿರ್ವಹಿಸುವುದಕ್ಕೆ ಸರ್ವಶಕ್ತಿಯೂ ಎಂದು ಹಿರಿಯರಿಂದ ಕೇಳಿ, ಆಸೆಯಿಂದ ನಿನ್ನನ್ನು ಮರೆಹೊಗುವೆನೆಂದು ಪ್ರತಿಜ್ಞೆಮಾಡಿದೆನು. ಈಗಲೂ ನನ್ನ ದೋಷಗಳನ್ನು ಎಣಿಸಿ ಹಿಂದೆಗೆಯುವೆನೆಂದರೆ, ನಿನ್ನ ಗುಣಗಳು ನನ್ನ ಅಳುಕನ್ನು ತೀರಿಸಿ, ಬಲ್ಮೆಯಿಂದ ಎಳೆದೊಯ್ದು ನಿನ್ನ ಸಿರಿಯಡಿಯ ನೆರಳಿನಲ್ಲಿ ನಿಲಿಸುತ್ತಿದೆ. ಅದು ಹೇಗೆಂದರೆ—ಅನಾದಿಕಾಲದಿಂದ ಈ ವರೆಗೆ ನಾನು ಮಾಡಿದ ಹಲವು

ಪಾತಕಗಳನ್ನು ಎಣಿಸಿ ಕೈ ತೆಗೆಯುವಷ್ಟರಲ್ಲೆ ಸೇರಿದವರ ತಪ್ಪನ್ನು ಒಪ್ಪುಮಾಡುವ ನಿನ್ನ ವಾತ್ಸಲ್ಯಗುಣವು ಮುಂದುವರಿದು ನನ್ನನ್ನು ದಟ್ಟಿಗಟ್ಟಿಸುತ್ತಿದೆ. ನಾನು ಅಜ್ಞನೂ ಅಶಕ್ತನೂ ಆದುದರಿಂದ ನಿನ್ನ ಚಿತ್ತ ಬರುವಂತೆ ಇಷ್ಟೂ ನಡೆಯಲಾರದ ನನ್ನನ್ನು ನೀನು ಯಾವ ರೀತಿಯಿಂದ ಕೈ ಹಿಡಿಯುವೆ ಎಂದು ಎಣಿಸಿ ಬೆಚ್ಚುವಷ್ಟರಲ್ಲಿ ನೀನು ಒಡೆಯನೂ ನಾನು ಒಡವೆಯೂ ಆದುದರಿಂದ ಒಡೆಯನು ಒಡವೆಯನ್ನು ಕಾಪಾಡುವುದಕ್ಕೆ ಕೂಲಿಯಿಲ್ಲ ಎಂಬ ಈ ಸ್ವಸ್ವಾಮಿ ಸಂಬಂಧ ಜ್ಞಾನವು ಅಭಯವನ್ನು ಕೊಡುತ್ತಿದೆ. ಅಖಿಲಹೇಯಪ್ರತ್ಯನೀಕನಾದ ನಿನ್ನ ಮೇಲ್ಮೆಯನ್ನೂ ಸಕಲಹೇಯಾಸ್ಪದವಾದ ನನ್ನ ಕೀಳ್ಮೆಯನ್ನೂ ಎಣಿಸಿ, ನಿನಗೂ ನನಗೂ ಸಂಗತಿಯಿಲ್ಲ ಎಂದು ಹಿಂದೆಗೆಯುವಷ್ಟರಲ್ಲಿ ಹಿರಿಯನಾಗಿಯೂ ಕಿರಿಯರೊಡನೆ ಒಂದುಗೂಡಿ ಸೊಗಯಿಸುವ ನಿನ್ನ ಸೌಶೀಲ್ಯಗುಣವು ನನ್ನನ್ನು ಬರಸೆಳೆಯುತ್ತಿದೆ. ಬ್ರಹ್ಮಾದಿಗಳಿಗೂ ಅವಾಙ್ಮನಸಗೋಚರನಾದ ನಿನ್ನನ್ನು ನಾನು ಕಾಣುವುದು ಕಷ್ಟವೆಂದು ಅಚೆ ಹೋಗುವಷ್ಟರಲ್ಲೆ ಯದುಶೈಲದೀಪವೆನಿಸಿ ಸಕಲ ಜನ ನಯನಾನಂದವಾದ ನಿನ್ನ ದಿವ್ಯಮಂಗಳ ವಿಗ್ರಹವು ನನ್ನನ್ನು ಆಳ್ಗೊಳ್ಳುತ್ತಿದೆ. ಹೀಗಾಗುವುದರಿಂದ ಜ್ಞಾನ ಭಕ್ತಿ ವೈರಾಗ್ಯ ಮೊದಲಾದ ಸದ್ಗುಣಸಂಪನ್ನರಿಗೂ ಅಕಿಂಚನರೂ ಅನನ್ಯಗತಿಗಳೂ ಆದ ನನ್ನಂಥವರಿಗೂ ಒಂದೇ ಕಾಪಾಗಿ ಸರ್ವಶರಣ್ಯನೆನ್ನಿಸಿದ ನಿನ್ನ ಮರೆಹೊಕ್ಕೆನು. ನನ್ನನ್ನು ಕೈಹಿಡಿದು ಕಾಪಾಡುವುದು, ಕಾಪಾಡುವುದು, ಅನನ್ಯಜನ ಸುಲಭ, ಶ್ರೀ ಯದುಶೈಲವಲ್ಲಭಾ!

## ಇಪ್ಪತ್ತೆಂಟನೆಯ ಬಿನ್ನಹ

ಮಾಯೆಯ ಆ ಕಾರ್ಯಗಳನ್ನು ನೀನು ಈ ಎಡೆಯಲ್ಲಿ ಬಿಡಿಸಿ ಸಲಹುವೆ, ಎಂದು—ಆ ಮಾಯಿಮುರಾಟರ ಗಂಡನು ಮಾಯಾತೀತನಿಗೆ ಮಣಿದು ಬಿನ್ನಹ ಮಾಡಿದನು.

ಸಕಲಜೀವದಯಾಪರಾ! ಜೀವಾತ್ಮರು ಹಲವರಾಗಿ ನಿತ್ಯರೆಂದೂ ಮುಕ್ತರೆಂದೂ ಬದ್ಧರೆಂದೂ ಮೂರು ತೆರನಾಗಿರುವರು. ಅವರಲ್ಲಿ

ನಿತ್ಯರು ನಿನ್ನ ಸತ್ಯಸಂಕಲ್ಪದಿಂದ ಒಮ್ಮೆಯೂ ಪ್ರಕೃತಿಸಂಬಂಧವಿಲ್ಲದೆ ಯಾವಾಗಲೂ ನಿನ್ನ ಸನ್ನಿಧಿಯಲ್ಲಿದ್ದು ಕಲ್ಯಾಣಗುಣಗಳನ್ನು ಅನುಭವಿಸುತ್ತಾ ನಿನ್ನ ಹಲವು ಊಳಿಗದವರಾಗಿರುವರು. ಮುಕ್ತರೆಂಬವರು ಅನಾದಿಕಾಲದಿಂದ ಸಂಸಾರದಲ್ಲಿದ್ದು ನಿನ್ನ ಕಟಾಕ್ಷದಿಂದ ಸತ್ವಗುಣಸಂಪನ್ನರಾಗಿ ಮುಕ್ತಿಯನ್ನು ಪಡೆದು, ನಿತ್ಯರಂತೆ ನಿನ್ನ ಊಳಿಗದವರಾಗಿರುವರು. ಬದ್ಧರೆಂಬವರು ಸಂಸಾರದಲ್ಲಿ ಕಟ್ಟುಪಡೆದು ಪ್ರಕೃತಿಗೆ ಪರತಂತ್ರರಾಗಿರುವರು. ಈ ಬದ್ಧರೂ ಸಂಸಾರಿಗಳೆಂದೂ ಮುಮುಕ್ಷುಗಳೆಂದೂ ಎರಡು ತೆರನಾಗಿರುವರು. ಅಲ್ಲಿ ಸಂಸಾರಿಗಳೆಂಬವರು ನಿನ್ನನ್ನು ಮರೆತು ವಿಷಯಾನುಭವಪರರಾಗಿರುವರು. ಮುಮುಕ್ಷುಗಳೆಂಬವರು ನಿನ್ನ ಕಟಾಕ್ಷದಿಂದ ಈ ವಿಷಯಗಳಲ್ಲಿ ವೈರಾಗ್ಯ ಹುಟ್ಟಿದುದರಿಂದ ಈ ಪ್ರಕೃತಿಸಂಬಂಧವನ್ನು ಕಳೆಯಬೇಕು ಎಂದು ನಿನ್ನನ್ನು ಮರೆಹೊಕ್ಕರು. ಈ ನಿತ್ಯರಿಗೂ ಮುಕ್ತರಿಗೂ ಅಪೇಕ್ಷಿತವಾದ ನಿನ್ನ ಊಳಿಗವನ್ನೂ ಮುಮುಕ್ಷುಗಳಿಗೆ ಅಪೇಕ್ಷಿತವಾದ ಮೋಕ್ಷವನ್ನೂ ನೀನೇ ಮನವೊಲಿದು ಪಾಲಿಸುವೆ. ಸಂಸಾರಿಗಳಿಗೂ ಅಪೇಕ್ಷಿತವೆನ್ನಿಸುವ ಇಹಪರ ಐಶ್ವರ್ಯಗಳನ್ನು ಅವರವರು ಪೂಜಿಸುವ ದೇವತಾಂತರ್ಯಾಮಿಯಾಗಿದ್ದು ಪಾಲಿಸುವೆ. ಹೀಗೆ ನೀನು ಸಕಲಾತ್ಮವರ್ಗದಲ್ಲೂ ದಯೆ ಮಾಡುತ್ತಿರಲು, ನಾನು ಇಂದು ನಿನ್ನನ್ನು ಪ್ರಾರ್ಥಿಸುವ ಚಾಪಲವನ್ನು ಸೈರಿಸಿ, ಸಲಹುವುದು, ಸಲಹುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

## ಇಪ್ಪತ್ತೊಂಬತ್ತನೆಯ ಬಿನ್ನಹ

ನಿನ್ನ ದಿವ್ಯವಿಗ್ರಹವು ಸಿರಿಯ ನೆಲೆ, ನಿತ್ಯಭೋಗ್ಯವು, ಶರಣ್ಯವಾದುದು ಎಂದು—ಆ ಧರಣೀವರಾಹಬಿರುದಿನವನು ಚೆಲುವರಾಯನಿಗೆ ಚರಣಾಬ್ಜಕ್ಕೆ ಮಣಿದು ಒರೆದನು.

ದಿವ್ಯಮಂಗಳವಿಗ್ರಹಾ! ಹುಟ್ಟುವಾಗ ನಿನ್ನ ಕಟಾಕ್ಷವನ್ನು ಪಡೆದು ಸಾತ್ವಿಕರಾದವರು ಪ್ರಾಕೃತವಾದ ಶಬ್ದಾದಿ ವಿಷಯಗಳು ಹೇಯಗಳೆಂದು ತಿಳಿದು, ಅವುಗಳಲ್ಲಿ ಪ್ರೀತಿಯನ್ನು ಬಿಟ್ಟು, ಪರಮಭೋಗ್ಯ

ವಾದ ನಿನ್ನ ದಿವ್ಯಮಂಗಳ ವಿಗ್ರಹವನ್ನು ಬಯಸುವರು. ಕುಮತಿಗಳು ಕೆಲವರು ನಿನಗೆ ವಿಗ್ರಹವಿಲ್ಲವೆಂದು ಅಪಲಪಿಸುವರು. ಅವರು ಪವಣಿಸುವ ಕುಯುಕ್ತಿಗಳು ಹೇಗೆಂದರೆ:—ಪರಮಾತ್ಮನಿಗೆ ಶರೀರವುಂಟಾದರೆ ಜೀವಾತ್ಮನಂತೆ ಕರ್ಮವಶ್ಯನಾಗುವನು; ಶರೀರಾತ್ಮಭ್ರಮದಿಂದ ಸಂಸಾರಿಯೂ ಆಗುವನು; ಶರೀರವುಳ್ಳವನಿಗೆ ಇಂದ್ರಿಯ ಸನ್ನಿಕೃಷ್ಟವಸ್ತು ಸಾಕ್ಷಾತ್ಕಾರವಲ್ಲದೆ ಸಕಲವಸ್ತು ಸಾಕ್ಷಾತ್ಕಾರವಿಲ್ಲದುದರಿಂದ ಸ್ವಾಧೀನವಾಗಿರುವ ಕಾಲದಲ್ಲಿ ಮಿತಿಯಾಗಿರುವ ಕಾಲದಲ್ಲಿಯಲ್ಲದೆ ಎಣಿಸಿದಂತೆಲ್ಲವೂ ಮಾಡಕೂಡದುದರಿಂದ ಅಲ್ಪಶಕ್ತಿಯೂ ಆಗುವುದು; ಆದರಿಂದ ಪರಮಾತ್ಮನಿಗೆ ಶರೀರವಿಲ್ಲವೆಂದು ಹೇಳುವರು. ಈ ಪಕ್ಷವು ಯುಕ್ತಾಯುಕ್ತ ವಿಚಾರ ಮಾಡುವ ಭಾವುಕರಿಗೆ ಸೊಗಯಿಸದು. ಅದು ಹೇಗೆಂದರೆ—ದೇವ ತಿರ್ಯಕ್ ಸ್ಥಾವರರೂಪವಾದ ಸಕಲಜೀವ ಶರೀರದಲ್ಲಿ ಅಂತರ್ಯಾಮಿಯಾಗಿದ್ದೂ ನಿರ್ಲೇಪನಾಗಿರುವವನಿಗೆ ತನಗೆಂದು ಒಂದು ಶರೀರವುಂಟಾದರೆ ಮೊದಲು ಹೇಳಿದ ದೋಷ ಬರುವುದೆಂಬುದು ಯುಕ್ತವಲ್ಲ. ದೇವ ಮನುಷ್ಯಾದಿಗಳು ತಮ್ಮ ತಮ್ಮ ಪೂರ್ವ ಕರ್ಮಾನುಗುಣವಾದ ಶರೀರದಲ್ಲಿದ್ದು ಕರ್ಮಫಲವನ್ನು ಅನುಭವಿಸುವುದರಿಂದ ಅವರಿಗೆ ಶರೀರಸಂಬಂಧವು ದೋಷವನ್ನು ತರತಕ್ಕದ್ದು. ಪರಮಾತ್ಮನು ತಾನು ಕರ್ಮಪರವಶನಲ್ಲದಿದ್ದರೆ ಜೀವಾತ್ಮರನ್ನು ಆಯಾ ವ್ಯಾಪಾರದಲ್ಲಿ ಕರ್ಮಾನುಗುಣವಾಗಿ ಪ್ರೇರಿಸುವುದಕ್ಕಾಗಿ ದೇವ ಮನುಷ್ಯಾದಿ ಶರೀರದಲ್ಲಿ ಇರುವುದು ದೋಷತರುವುದಲ್ಲ. ಹೀಗೆ ಹೇಯವಾದ ದೇವಾದಿ ಶರೀರದಲ್ಲಿದ್ದೂ ನಿರ್ದೋಷನಾಗಿರುವ ನಿನಗೆ ಅಪ್ರಾಕೃತವಾದ ನಿನ್ನ ದಿವ್ಯವಿಗ್ರಹಸಂಬಂಧದಿಂದ ದೋಷಲೇಶದ ಪ್ರಸಕ್ತಿಯಿಲ್ಲ. ಮತ್ತೆ, ನಿನ್ನ ದಿವ್ಯಮಂಗಳವಿಗ್ರಹವು ನಿನ್ನ ಮಹಿಮೆಗೆ ತಕ್ಕುದಾಗಿ ನಿನ್ನ ಮನಸ್ಸು ಬಂದುದು ಆದ ಸುಗಂಧವೂ ಕಾಂತಿಯೂ ಯೌವನವೂ ಮುಂತಾದ ಸಕಲ ಗುಣಗಳನ್ನು ಪಡೆದು, ಜ್ಞಾನ ಬಲ ಐಶ್ವರ್ಯ ವೀರ್ಯ ಶಕ್ತಿ ತೇಜಸ್ಸು ಸೌಶೀಲ್ಯ ಮೊದಲಾದ ಸ್ವರೂಪಗುಣಗಳಿಗೆ ಪ್ರಕಾಶವಾಗಿ, ಲಕ್ಷ್ಮೀನಿವಾಸಸ್ಥಾನವಾಗಿ, ನೀನು ನೆನೆದ ಹಾಗೆ ಇರುವುದರಿಂದ ನಿನಗೆ ಅತಿಶಯವನ್ನು ತರತಕ್ಕದ್ದು ಎಂದು ಹಿರಿಯರು ಹೇಳುವರು.

ಹಾಗಿರುವ ದಿವ್ಯಮಂಗಳವಿಗ್ರಹದ ಸಾಕ್ಷಾತ್ಕಾರ ರಸಸರ್ವಸ್ವ ದಾನ ದಿಂದ ನನ್ನ ಮನೋರಥವನ್ನು ಸಲಿಸುವುದು, ಸಲಿಸುವುದು, ಅನನ್ಯಜನ ಸುಲಭ, ಶ್ರೀ ಯದುಶೈಲವಲ್ಲಭಾ!

## ಮೂವತ್ತನೆಯ ಬಿನ್ನಹ

ಶ್ರೀನಾಥಾ! ನಿತ್ಯನಿರವಧಿಕಾನಂದ! ಅನಂತ! ನಿನ್ನ ಸೇವೆಯೆ ಫಲ ಎಂದು— ನಾನಾವಿಧಮಕುಟಮಂಡಲೀಕರ ಗಂಡನು ಆ ನಿರ್ಮಲನ ಅಡಿಗೆ ಒರೆದನು.

ಸಕಲಕಲ್ಯಾಣಗುಣಾತ್ಮಕಾ! ನಿನಗೆ ನಾವು ಏಳೇಳು ತೆರದಿಂದ ಹಲವು ಊಳಿಗದವರು ಆದುದರಿಂದ ಯಾವಾಗಲೂ ನಿನ್ನ ಸಿರಿಯಡಿಯ ಊಳಿಗವನ್ನು ನೆರವೇರಿಸುವುದು ನಮಗೆ ಸ್ವತಃಸಿದ್ಧ ಎಂಬುದು ಮಾತ್ರ ವಲ್ಲ. ಮತ್ತೆಯೂ ನಿನ್ನ ಅಡಿಯೂಳಿಗದವರಲ್ಲಿ ನೀನು ಹೊರೆಯಿಲ್ಲದೆ ಒಡನೆ ಬೆರೆದಿದ್ದೂ ತಣಿಯದೆ, ಅರ್ಜುನಾದಿಗಳಲ್ಲಿ ಆಳು ಅರಸುತನ ವನ್ನು ಪಲ್ಲಟಮಾಡಿ ನಲಿಯುವ ಸುಶೀಲನೆಂದೂ, ಅವರಲ್ಲಿ ತೋರಿದ ತಪ್ಪನ್ನು ಸೈರಿಸುವುದಲ್ಲದೆ ಭೃಗುಮುನಿ ಮೊದಲಾದವರಲ್ಲಿ ನೀನೇ ತಪ್ಪಿದವನಂತೆ ಒಡಂಬಡಿಸುವ ಕಡುಸೈರಣೆಯುಳ್ಳವನೆಂದೂ, ಅವರಿಗೆ ಅಡಸಿದ ಎಡರನ್ನು ನೀನು ಇದ್ದೆಡೆಯಲ್ಲೇ ಇದ್ದು ಸಂಕಲ್ಪಮಾತ್ರದಿಂದ ಪರಿಹರಿಸುವುದಲ್ಲದೆಯೂ ಗಜೇಂದ್ರನ ಮೊರೆಯನ್ನು ಆಲಿಸಿದ ಅಂದು ಕದುಬುಗೊಂಡು ನೀನು ಭರದಿಂದ ಒದಗಿದ ಕಟ್ಟಿರಕದವನೆಂದೂ, ಅವರು ಮಾಡುವ ಪ್ರತಿಜ್ಞೆಯನ್ನು ಸಲಿಸುವುದಲ್ಲದೆಯೂ ಭೀಷ್ಮನಲ್ಲಿ ನಿನ್ನ ಪ್ರತಿಜ್ಞಾಹಾನಿಯನ್ನೂ ಅಂಗೀಕರಿಸಿದ ಭಕ್ತಪ್ರಯೋಜನೈಕಪರ ನೆಂದೂ, ಅವರು ಅರ್ಚನಾವಿಧಿಯಲ್ಲಿ ನಿವೇದನ ಮಾಡಿದುದು ಏನಾ ದರೂ ಆರೋಗಿಸುವುದಲ್ಲದೆ ಸುಚರಿತನ ಕುಮಾರನು ಸುಮ್ಮನೆ ತಂದು ಮುಂದಿಟ್ಟ ಭಿಕ್ಷಾನ್ನವನ್ನು ಪ್ರತ್ಯಕ್ಷದಲ್ಲಿ ಸೇವಿಸಿದ ಸುಲಭನೆಂದೂ, ಅವರಿಗೆ ಕೊಡುವುದೆಲ್ಲವನ್ನು ಕೊಟ್ಟೂ ಮತ್ತೂ ತಣಿಯದೆ ರಾಮಾ ನುಜಾಚಾರ್ಯರಿಗೆ ನಿನ್ನನ್ನೇ ಕೊಟ್ಟು ಯತಿರಾಜಕುಮಾರನೆನ್ನಿಸಿದ ಕಡು ಚಾಗಿಯೆಂದೂ ಅವರಿಗೆ ದೇಶವಿಶೇಷದಲ್ಲಿ ಸಾಯುಜ್ಯವನ್ನು ಕೊಡುವು ದಲ್ಲದೆ ಇಲ್ಲಿರುವವರೆಲ್ಲರೂ ಕಾಣುವಂತೆ ನನ್ನ ರಾಜನ್ಯಪಾಲರನ್ನು ನಿನ್ನ

ಅರ್ಚಾವಿಗ್ರಹದ ಮೆಲ್ಲಡಿದಾವರೆಯಲ್ಲಿ ಸೇರಿಸಿದ ಪರಮರಕ್ಷಕನೆಂದೂ, ಇವು ಮೊದಲಾದ ನಿನ್ನ ಕಲ್ಯಾಣಗುಣಗಳನ್ನು ಕೇಳಿ ತಿಳಿದು ಸಂತೋಷ ಪಡೆದು--ಈ ಒಡೆಯನಿಗೆ ಊಳಿಗವನ್ನು ಮಾಡುವುದಕ್ಕಿಂತಲೂ ಬೇರೊಂದು ಆನಂದವಿಲ್ಲವೆಂದು ಸ್ವರುಚಿಯಿಂದ ಈಗ ನಾನು ಹೊಸ ಊಳಿಗದವನು ಎನ್ನಿಸಿ ಸೇರಿದೆನು. ನನ್ನನ್ನು ಆಳ್ಗೊಳ್ಳುವುದು, ಆಳ್ಗೊಳ್ಳುವುದು, ಅನನ್ಯಜನಸುಲಭ, ಶ್ರೀ ಯದುಶೈಲವಲ್ಲಭಾ!

# ಪ್ರಶಸ್ತಿ

ಇದು ಸಕಲಜಗದುದಯವಿಭವಾದಿಲೀಲನೂ ಲಕ್ಷ್ಮೀಲೋಲನೂ ಅಖಿಲಹೇಯಪ್ರತ್ಯನೀಕನೂ ಅಪ್ರಾಕೃತಪ್ರತೀಕನೂ ಅವಾಪ್ತಸಮಸ್ತ ಕಾಮನೂ ಅನಂತಕಲ್ಯಾಣಗುಣಗಣಾರಾಮನೂ ಸಾರಸಭವಪೂಜಿತನೂ ಸನಕಮುನಿಸಭಾಜಿತನೂ ಯದುಶಿಖರಿಶಿಖರಾಲಂಕಾರನೂ ಯತಿರಾಜ ಸಂಪತ್ಕುಮಾರನೂ ಆಶ್ರಿತರಕ್ಷಾಪರಾಯಣನೂ ಆದ ಯಾದವಗಿರಿ ನಾರಾಯಣನ ಅಡಿದಾವರೆಯ ಊಳಿಗದಲ್ಲಿ ಬಳೆದು ಏಳ್ಗೆ ತಳೆದ ಯಾದವಕುಲೋದ್ಧಾರಕನೂ ಶುಭಗುಣೋದ್ಧಾರಕನೂ ಆದ ದೇವ ರಾಜನೃಪಾಲಪೌತ್ರನೂ ಅತ್ರಿಗೋತ್ರಪವಿತ್ರನೂ ದೊಡ್ಡದೇವರಾಜ ಗರ್ಭಾಂಬುಧಿಕಲಾಧರನೂ ಸಕಲಕಲಾಧರನೂ ಅಶ್ವಾರೋಹಣಕಲಾ ರೇವಂತನೂ ಗಜಾರೋಹಣಮಘವಂತನೂ ಅಸ್ತ್ರವಿದ್ಯಾಭ್ಯಗುರಾಮನೂ ಅಪ್ರತಿಮಧಾಮನೂ ಕರ್ಣಾಟಕ ಭೂಮಂಡಲಾಧೀಶನೂ ದೇವ ಸಂಕಾಶನೂ ಪಶ್ಚಿಮರಂಗಪುರಸಿಂಹಾಸನಾಧಿಷ್ಠಿತನೂ ಸುಪ್ರತಿಷ್ಠಿತನೂ ದೇವಬ್ರಾಹ್ಮಣ ಪರಿಪಾಲನೈಕಾಂತನೂ ಸಕಲ ಪ್ರಜಾಕಾಂತನೂ ಅಸಕೃ ದಾವರ್ತಿತಷೋಡಶಮಹಾದಾನನೂ ಆಶ್ರಿತಸರ್ವಶ್ರೇಯೋನಿದಾನನೂ ರಸಿಕಜನಕರ್ಣರಸಾಯನೀಕೃತಸಂಗೀತವಿಸ್ತಾರನೂ ಸಾಹಿತ್ಯವಿದ್ಯಾನಿ ಕಷಪ್ರಸ್ತರನೂ ಪೂರ್ವದಿಗ್ವಿಜಯಯಾತ್ರಾವಿತ್ರಾಸಿತ ಚೇದಮಂಗಲ ಉಪಾನ್ತಕಾಂತಾರೋಪಗೂಢವ್ಯೂಢಸೇನಾಭಿಗುಪ್ತ ಪಾಂಡ್ಯಸೇನಾ ಧಿಪ ಸಂಗರಕಿರೀಟ ವೆಂಕಟಕೃಷ್ಣ ಶಿಬಿರಸರ್ವಸ್ವ ಹರಣಸಮಸಮಯ ಸಮಾಕ್ರಾಂತ ಮಳಲಿ ಪರಮತ್ತಿಶಾಲೆಯ ಚೇದಿಮಂಗಲ ಕೊಂಗು ಧಾರಾಪುರಾದಿ ಪಾಂಡ್ಯನೃಪದುರ್ಗಮದುರ್ಗಸ್ತೋಮನೂ ಸಂಗರ ಭೀಮನೂ ಉದ್ವೃತ್ತಸುರತ್ರಾಣಚಮೂವಿಕ್ಷೋಭಣವಿಚಕ್ಷಣವಿಕಟ ಮರಾಟ ಶಿವಾಜಿವಾಜಿಸೇನಾಧಿಪ ಜಯತಜಿಕಾಟಕರ ದಾದಜಿ ಕಾಕಡ ಪ್ರಮುಖಕಂಠನಾಳೋಚ್ಚಲದ್ರಕ್ತಧಾರಾಸಿಕ್ತಕೃಪಾಣ ಸಂದರ್ಶನ ವಿಲೀನ ಹರಜಿ ಸಂತಜಿ ಮುಖ್ಯ ಮಹಾರಾಷ್ಟ್ರನೃಪಪ್ರವೇಕನೂ ಅಪ್ರತ್ಯ ನೀಕನೂ ಗಂಭೀರೋದ್ಧತಪರಿಘಾವರಣಭೀಷಣಶತಘ್ನೀಶತಸಂಕುಲ

ಮತ್ತಮಾವಳಿಸೇನಾವಳೀವರ್ಮಿತಧರ್ಮಪುರೀಪ್ರಸಭಾಕ್ರಮಣಶ್ರವಣ ಸಿರ್ಜನೀಕೃತ ಕೆಂಗೇರಿ ವಾಮಲೂರು ಬೇವುಹಳ್ಳಿ ಬೈರನೆತ್ತ ಕುನ್ನತ್ತೂರ್ ಮುಖ್ಯ ದುರ್ಗವರ್ಗನಿರಾಯಾಸಾಕ್ರಮಣನಿರ್ವೃತ ನಿಜಸೈನಿಕ ಸಮೂಹನೂ ಆಹವಕಲಾಶ್ರೀತವಾಹಸನೂ ದಕ್ಷಿಣ ದಿಗ್ವಿಜಯಯಾತ್ರಾ ವಿತ್ರಾಸಿತಸಲಾಯಿತಪಾಂಡ್ಯಬಲಾನುಧಾವನಶ್ರಾಂತನಿಜಬಲವಿಶ್ರಾಂತಿ ಸ್ಥಾನೀಕೃತಜಲಧಿವೇಲಾತಮಾಲಾರಣ್ಯನೂ ಆನತಜನಶರಣ್ಯನೂ ಪಶ್ಚಿಮದಿಗ್ವಿಜಯಪ್ರಸ್ಥಾನಭೇರೀರವಾಕರ್ಣನ ಸಂಭ್ರಾಂತದುರ್ದಾಂತ ಹುಶಾನಖಾನ ಸನಾಥಕೆಳದಿನೃಪ ಸಮರ್ಪಿತ ಸರ್ವಸ್ವನಿರ್ವಾಪಿತ ಕೋಪನೂ ಅಮಿತಪ್ರತಾಪನೂ ಉತ್ತರದಿಗ್ವಿಜಯಸಮಯಾಭಿಯಾತ ಕುತುಪಶಾಹವಾಹಿನೀ ವಿಮರ್ದನ ಕ್ಷಣಾಕ್ರಾಂತ ಕಂಡಿಕೆರೆ ಚಿಕ್ಕನಾಯಕನಹಳ್ಳಿ ಹೊನ್ನವಳ್ಳಿ ಸಾರತವಳ್ಳಿ ತುರುಗೆರೆ ಪ್ರಮುಖದುರ್ಗ್ರಹಪ್ರಾಕಾರವಾರನೂ ಅಸಹಾಯಶೂರನೂ ಜಡಕನದುರ್ಗ ಹಠಾತ್ಗ್ರಹಣ ವೇಳಾನಿಖಾತ ಸುರಂಗಮುಖಾನಲೋತ್ಕ್ಷಿಪ್ತಗಂಡೋಪಲಪಾತ ನಿರ್ಧೂತ ಬಿಜ್ಜವರ ಮದ್ದಗಿರಿ ಚೆನ್ನರಾಯದುರ್ಗ ವೀರಣದುರ್ಗಾದಿ ಅಸಂಖ್ಯದುರ್ಗವರ್ಗಾಕ್ರಮಣಾವಸರಾವನತ ಸಾಮಂತನೃಪಾಲಮೌಳಿ ಮಣಿಘೃಣಿನೀರಾಜಿತಪದರಾಜೀವನೂ ಮಹಾನುಭಾವನೂ ಸಾಹಜಿ ಮುಖಮರಾಟನೃಪರಾಜಧಾನೀಕೃತಾಭಂಗುರ ಬೆಂಗಳೂರ್ ಹರಣ ನಿಷ್ಪ್ರಾಣಿತ ಶಂಭುಜಿ ಸಾಹಜಿ ಸಂತಜಿ ಹರಜಿ ಪ್ರಮುಖ ಮಹಾರಾಷ್ಟ್ರ ನೃಪಾಲಜಾಲನೂ ರಿಪುಕುಲಕಾಲನೂ ಸಂಗ್ರಾಮರಾಮನೂ ಸಾಹಸೋದ್ದಾಮನೂ ಪೌಢಪ್ರತಾಪನೂ ಪ್ರಕಟಿತಾಟೋಪನೂ ಅಮಿತ ಪರಾಕ್ರಮನೂ ಅಭೇದ್ಯವಿಕ್ರಮನೂ ಕರ್ಣಾಟಕ ಚಕ್ರವರ್ತಿಯೂ ಕಲ್ಯಾಣಕೀರ್ತಿಯೂ ಲೋಕೈಕವೀರನೂ ವೀರರ ಒಗ್ಗಂಡನೂ ಗಂಡರ ಒಗ್ಗಂಡನೂ ಅಂತೆಂಬರ ಗಂಡನೂ ಎನ್ನಿಸಿ ಪ್ರಸಿದ್ಧನಾದ ಶ್ರೀಮದ ಪ್ರತಿಮವೀರ ನರಪತಿ ಶ್ರೀ ಚಿಕದೇವ ಮಹಾರಾಜ ವಿರಚಿತವಾದ ದಿವ್ಯ ಪ್ರಬಂಧಗಳಲ್ಲಿ ಚಿಕದೇವರಾಜ ಬಿನ್ನಪಕ್ಕೆ ಜಯಮಂಗಳವು.

**ಸಂಪೂರ್ಣಂ.**

ಅನುಬಂಧ ಒಂದು

## 'ಚಿಕದೇವರಾಜ ಬಿನ್ನಪ'ದ ತಿರುಳು

ಬಿನ್ನಪ ೧ ರಿಂದ ೧೦—ಈಶ್ವರ ತತ್ತ್ವ ವರ್ಣನೆ.
ಬಿನ್ನಪ ೧೧ —ಚಿತ್ ಅಥವಾ ಜೀವತತ್ತ್ವ ವರ್ಣನೆ.
ಬಿನ್ನಪ ೧೨ —ಅಚಿತ್ ಅಥವಾ ಪ್ರಕೃತಿತತ್ತ್ವ ವರ್ಣನೆ.
ಬಿನ್ನಪ ೧೩ —ಸಮಷ್ಟಿ-ವ್ಯಷ್ಟಿ ಸೃಷ್ಟಿ ವರ್ಣನೆ.
ಬಿನ್ನಪ ೧೪ ರಿಂದ ೧೮—ಭುವನಗಳ, ಭೂಸ್ವರ್ಗಗಳ, ನರಕಗಳ ವರ್ಣನೆ.
ಬಿನ್ನಪ ೧೯ ರಿಂದ ೨೨—ಮುಕ್ತಿಮಾರ್ಗಗಳ ವರ್ಣನೆ.
ಬಿನ್ನಪ ೨೩ ರಿಂದ ೨೪—ಕರ್ಮ-ಸಂಸಾರ ಸಂಬಂಧ.
ಬಿನ್ನಪ ೨೫ ರಿಂದ ೩೦—ಪ್ರಪತ್ತಿಯ ಪಾರಮ್ಯ.

### ೧. ಈಶ್ವರ ತತ್ತ್ವವರ್ಣನೆ

೧. ವೈಕುಂಠದಲ್ಲಿ **ಪರವಾಸುದೇವನಾಗಿ** ಅವ್ಯಕ್ತವಾಗಿರುವ ಶ್ರೀಮನ್ನಾರಾಯಣನು ಭಕ್ತರ ಅನುಗ್ರಹಕ್ಕಾಗಿ **ವ್ಯೂಹ, ವಿಭವ, ಅಂತರ್ಯಾಮಿ** ಮತ್ತು **ಅರ್ಚಾ** ಎಂಬ ನಾಲ್ಕು ಪ್ರಕಾರಗಳಲ್ಲಿ ವ್ಯಕ್ತನಾಗಿದ್ದಾನೆ. ಈತನೇ ಶಾಶ್ವತನಾದ **ಈಶ್ವರ** ತತ್ತ್ವ.

೨. ಬ್ರಹ್ಮಾಂಡ ಸೃಷ್ಟಿಯೂ ಬ್ರಹ್ಮಾದಿ ದೇವತೆಗಳ ಸೃಷ್ಟಿಯೂ ಜಗತ್‌ಸೃಷ್ಟಿಯೂ ಈತನಿಂದಲೇ ಆದುದು. ಈ ಈಶ್ವರ ತತ್ತ್ವವೇ ಜಗತ್ತಿಗೆ ಆದಿಕಾರಣ.

೩. ಪ್ರತ್ಯಕ್ಷ, ಅನುಮಾನ, ಶಬ್ದ ಎಂಬ ಮೂರೂ ರೀತಿಯ ಪ್ರಮಾಣಗಳಿಂದಲೂ ಈ ಈಶ್ವರ ತತ್ತ್ವವನ್ನು ತಿಳಿದು ಮುಗಿಸುವುದು ಸಾಧ್ಯವಿಲ್ಲ. ಆದ್ದರಿಂದ ಈಶ್ವರನು ಅಪ್ರಮೇಯ.

೪. ವೇದಗಳೇ ಮೊದಲಾದ ಹದಿನೆಂಟು ವಿದ್ಯೆಗಳೂ ಈ ಈಶ್ವರ ತತ್ತ್ವದಿಂದಲೇ ಪ್ರವರ್ತನೆಯಾದುವು. ಇಷ್ಟು ವಿದ್ಯೆಗಳಲ್ಲಿ ಪ್ರಧಾನವಾಗಿರುವ **ವೇದಾಂತವು** ಈಶ್ವರ ತತ್ತ್ವದ ಸ್ವರೂಪವನ್ನು ತಿಳಿಸುತ್ತದೆ ಆದರೂ—

೫. ಅವುಗಳಾಗಲಿ ಸಕಲ ಸ್ಮೃತಿ ಇತಿಹಾಸ ಪುರಾಣಗಳಾಗಲಿ ಈಶ್ವರ ತತ್ತ್ವವನ್ನು ವರ್ಣಿಸಿ ಕಡೆಗಾಣಲಾರವು.

೬. ವೇದಗಳು ಈಶ್ವರನನ್ನು ಸಗುಣನೆಂದೂ ನಿರ್ಗುಣನೆಂದೂ, ಹಿರಿದಕ್ಕಿಂತ ಹಿರಿಯನೆಂದೂ ಕಿರಿದಕ್ಕಿಂತ ಕಿರಿಯನೆಂದೂ, ಸಾಕಾರನೆಂದೂ ನಿರಾಕಾರನೆಂದೂ, ಅವಾಙ್ಮಾನಸ ಗೋಚರನೆಂದೂ ವೇದವೇದ್ಯನೆಂದೂ, ಹುಟ್ಟುಹೊಂದುಗಳಿಲ್ಲದವನೆಂದೂ ಮತ್ಸ್ಯ ಮೊದಲಾದ ರೂಪದಿಂದ ಹುಟ್ಟಿದವನೆಂದೂ ಪರಸ್ಪರ ವಿರೋಧವಾಗಿ ತೋರುವಂತೆ ಹೇಳಿದ್ದರೂ ಸಕಲ ವೇದಾಂತಗಳನ್ನು ಸಮನ್ವಯಿಸಿದವರಿಗೆ ಇದರಲ್ಲಿ ಯಾವ ಭೇದವೂ ಕಾಣದು.

೭. ಇಂತಹ ಸರ್ವಾಶ್ಚರ್ಯಮಯನಾದ ಈಶ್ವರನಿಗೆ **ಚಿತ್**, **ಅಚಿತ್** ಎಂಬ ಎರಡು ತತ್ತ್ವಗಳು ಶರೀರಗಳು. ಹೀಗೆ ಬ್ರಹ್ಮಕ್ಕೂ ಪ್ರಪಂಚಕ್ಕೂ ಭೇದ ಕಂಡುಬಂದರೂ, ಅಲ್ಲಿ ಅಭೇದವಿರುವುದರಿಂದ ಇದು **ಅದ್ವೈತ.** ಆದರೆ ಇದು **ಶುದ್ಧಾದ್ವೈತವಲ್ಲ, ವಿಶಿಷ್ಟಾದ್ವೈತ.**

೮. ಎಚ್ಚರದಲ್ಲಿ ಕಾಣುವ ವಸ್ತುಗಳನ್ನು ಈಶ್ವರನು ಸೃಷ್ಟಿಕ್ರಮದಿಂದ ಸೃಜಿಸಿದನು. ಕನಸಿನಲ್ಲಿ ಕಾಣುವುದನ್ನು ಸಂಕಲ್ಪಮಾತ್ರದಿಂದ ಸೃಜಿಸಿದನು. ಆದರೆ ಇದು ಕೂಡ ಈಶ್ವರನು ಸೃಜಿಸಿದುದಾದ್ದರಿಂದ, ತತ್ಕಾಲಮಾತ್ರಕ್ಕಾದರೂ, ಇದು ಸತ್ಯ. ಆದರಂತೆಯೆ ಪರಿಣಾಮ ಹೊಂದುತ್ತಿರುವ ಪ್ರಪಂಚವಾದರೂ ಮಿಥ್ಯೆಯಲ್ಲ, ಸತ್ಯ.

೯. ಈಶ್ವರನು ವಿಷಮನಲ್ಲ, ಕರ್ಮಕ್ಕೆ ಪರತಂತ್ರನೂ ಅಲ್ಲ, ನಿರ್ದಯನೂ ಅಲ್ಲ; ಈಶ್ವರನು ಸರ್ವಸಮನೂ ಸರ್ವಸ್ವತಂತ್ರನೂ ಆದ ದಯಾಳು.

೧೦. ಯಾವ ಕಾರ್ಯವಾಗಬೇಕಾದರೂ ಅದಕ್ಕೆ ಉಪಾದಾನ, ನಿಮಿತ್ತ ಮತ್ತು ಸಹಕಾರಿ ಎಂಬ ಮೂರು ಕಾರಣಗಳು ಉಂಟು. ಈ ಪ್ರಪಂಚ ಸೃಷ್ಟಿಯಾಗುವುದಕ್ಕೆ ಉಪಾದಾನಕಾರಣನೂ ಈಶ್ವರನೇ, ನಿಮಿತ್ತಕಾರಣನೂ ಈಶ್ವರನೇ, ಸಹಕಾರಿ ಕಾರಣನೂ ಈಶ್ವರನೇ.

## ೨. ಚಿತ್ ಅಥವಾ ಜೀವತತ್ತ್ವವರ್ಣನೆ

೧೧. ಈಶ್ವರನಿಗೆ ಅಧೀನವಾಗಿ, **ಚಿತ್** ಎನ್ನಿಸಿದ **ಜೀವಾತ್ಮ** ಎಂಬುದು ಉಂಟು. ಜೀವಾತ್ಮ ಎಂಬುದು ಶರೀರವಲ್ಲ, ಇಂದ್ರಿಯಗಳಲ್ಲ,

ಮನಸ್ಸಲ್ಲ, ಪ್ರಾಣವಾಯುವಲ್ಲ, ಜ್ಞಾನವಲ್ಲ; ಇವಕ್ಕಿಂತ ಬೇರೆಯಾಗಿ ಸ್ವಪ್ರಕಾಶವಾಗಿರುವುದು. ಇಂತಹ ಜೀವಾತ್ಮರುಗಳು ಒಂದೊಂದು ಶರೀರದಲ್ಲೂ ಇರುವರು. ಈ ಹಲವರು ಜೀವಾತ್ಮರು ಈಶ್ವರನ ಒಡವೆ, ಈಶ್ವರ ಅವುಗಳಿಗೆ ಒಡೆಯ. ಈ **ಸ್ವ-ಸ್ವಾಮಿ** ಸಂಬಂಧ ಸತ್ಯ. ಈ ಸಂಬಂಧವುಳ್ಳುದೇ ಜೀವದ ಲಕ್ಷಣ. ಆದ್ದರಿಂದಲೇ ಈಶ್ವರನು **ಪರಮಾತ್ಮ.** (೨೮ನೇ ಬಿನ್ನಹವನ್ನೂ ನೋಡಿ.)

## ೩. ಅಚಿತ್ ಅಥವಾ ಪ್ರಕೃತಿತತ್ತ್ವವರ್ಣನೆ

೧೨. ಈಶ್ವರನ ಶರೀರವೆನಿಸಿದ **ಚಿತ್** ಮತ್ತು **ಅಚಿತ್** ಎಂಬ ಎರಡು ತತ್ತ್ವಗಳಲ್ಲಿ ಅಚಿತ್ತಿಗೆ **ಪ್ರಕೃತಿ**ಯೆಂದೂ **ಮಾಯೆ**ಯೆಂದೂ **ಅವಿದ್ಯೆ**ಯೆಂದೂ **ಪ್ರಧಾನ**ವೆಂದೂ ಹೆಸರು. ಈ ಪ್ರಕೃತಿಯು ಕೆಲವೆಡೆಯಲ್ಲಿ **ಮಹತ್** ಎಂಬ ತತ್ತ್ವ ಹುಟ್ಟಿ, ಅದರಿಂದ ಮೂರು ತೆರದ **ಅಹಂಕಾರ**ತತ್ತ್ವ ಹುಟ್ಟಿ, **ಸಾತ್ವಿಕಾಹಂಕಾರ**ದಿಂದ **ಹನ್ನೊಂದು ಇಂದ್ರಿಯ**ಗಳೂ **ತಾಮಸಾಹಂಕಾರ**ದಿಂದ **ಪಂಚತನ್ಮಾತ್ರ**ಗಳೂ **ಪಂಚಭೂತ**ಗಳೂ ಹುಟ್ಟಿ; ಹೀಗೆ ಇಪ್ಪತ್ತುನಾಲ್ಕು ತೆರನಾದ ಅಚೇತನತತ್ತ್ವ ಸೃಷ್ಟಿಯಾಗುವುದು. ಇಂತಹ **ಪ್ರಕೃತಿತತ್ತ್ವ**ಕ್ಕೂ **ಜೀವತತ್ತ್ವ**ಕ್ಕೂ ಹಿರಿಯನಾದುದರಿಂದ ಈಶ್ವರನೇ **ಪರತತ್ತ್ವ.**

## ೪. ಸಮಷ್ಟಿ-ವ್ಯಷ್ಟಿ ಸೃಷ್ಟಿವರ್ಣನೆ

೧೩. ಈಶ್ವರನು ಜೀವರುಗಳ ಮೇಲಿನ ದಯೆಯಿಂದ ಅವರಿಗೆ ಇಂದ್ರಿಯಗಳನ್ನೂ ದೇಹಗಳನ್ನೂ ಅನುಗ್ರಹಿಸಿ, ಅವರು ನಿಂತು ಕರ್ಮ ಮಾಡುವುದಕ್ಕೆ ಸ್ಥಾನವಾಗಿ ಬ್ರಹ್ಮಾಂಡವನ್ನು ಸೃಜಿಸಿದನು.. **ಪಂಚೀಕರಣ ವಿಧಾನ**ದಿಂದ ಪಂಚಮಹಾಭೂತಗಳನ್ನು ಒಂದುಗೂಡಿಸಿ ಮಹತ್ ಅಹಂಕಾರ ತತ್ತ್ವಗಳಿಂದ ಬ್ರಹ್ಮಾಂಡವನ್ನು ಇಚ್ಛಾಮಾತ್ರದಿಂದ ಸೃಜಿಸಿದನು. ಅನಂತರ, ಬ್ರಹ್ಮಾಂಡದಲ್ಲಿ ಹುಟ್ಟಿಸುವ ಪ್ರಾಣಿವರ್ಗವನ್ನು ಆಳಲು ಚತುರ್ಮುಖ ಬ್ರಹ್ಮನನ್ನು ಸೃಜಿಸಿದನು.

## ೫. ಭುವನಗಳ, ಭೂಸ್ವರ್ಗಗಳ, ನರಕಗಳ ವರ್ಣನೆ

೧೪. ಬ್ರಹ್ಮಾಂಡದಲ್ಲಿರುವ ಭುವನಗಳು ಹದಿನಾಲ್ಕು. ಇವು ಎಲ್ಲಕ್ಕೂ ಈಶ್ವರನೇ ಆಧಾರ.

೧೫. ಈ ಭುವನಗಳಲ್ಲಿ ಈ ಭೂಮಿಯೂ ಒಂದು. ಇದಕ್ಕೂ ಈಶ್ವರನೇ ಒಡೆಯ.

೧೬. ಹದಿನಾಲ್ಕು ಭುವನಗಳಲ್ಲೂ ಸುಖಾನುಭವವಾದ **ಸ್ವರ್ಗ** ಗಳುಂಟು. ಹಾಗೆಯೇ ಭೂಮಿಯಲ್ಲೂ ಉಂಟು. ಇವಕ್ಕೆ ಭೂಸ್ವರ್ಗ ಗಳು ಎಂದು ಹೆಸರು. ಇಲ್ಲಿ ಅನುಭವಿಸುವ ಭೋಗಗಳನ್ನು ಈಶ್ವರನೇ ಕೊಡುವುದಾದರೂ ಅವು ಅನಿತ್ಯವಾದುವು. **ಶ್ರೀಹರಿಯ ಪಾದದೂಳಿಗ ವ್ರೊಂದೇ ನಿತ್ಯಭೋಗ.**

೧೭. ಸುಖಾನುಭವದ ಸ್ಥಾನಗಳಿರುವಂತೆಯೇ ದುಃಖವನು ಅನುಭವಿಸುವ ಸ್ಥಾನಗಳೂ ಉಂಟು. ಇವುಗಳಿಗೆ **ನರಕ** ಎಂದು ಹೆಸರು. ಈ ನರಕದ ಭಯವನ್ನು ನಾಶಮಾಡುವುದಕ್ಕೆ ಶ್ರೀಹರಿಯ ಸಂಕೀರ್ತನೆ ಯೊಂದೇ ಮಾರ್ಗ.

೧೮. ಪಾಪ ಮಾಡಿದವರು ನರಕಕ್ಕೆ ಹೋಗುವರು. ಅಲ್ಲಿ ಯಾತನಾಶರೀರವನ್ನು ಪಡೆದು ದುಃಖಗಳನ್ನು ಅನುಭವಿಸುವವರು ಕೃಷ್ಣಾನುಸ್ಮರಣದಿಂದ ತಮ್ಮ ಪಾಪವನ್ನು ಕಳೆದುಕೊಳ್ಳಬಹುದು.

## ೬. ಮುಕ್ತಿಮಾರ್ಗಗಳ ವರ್ಣನೆ

೧೯. ಪುರುಷಾರ್ಥಗಳಲ್ಲಿ **ಮೋಕ್ಷವೇ** ಎಲ್ಲಕ್ಕಿಂತ ದೊಡ್ಡದು. ಇದನ್ನು ಸಾಧಿಸುವುದಕ್ಕೆ **ಕರ್ಮ, ಜ್ಞಾನ, ಭಕ್ತಿ** ಮೊದಲಾದುವು **ಉಪಾಯ** ಎನ್ನುವರು. ಆದರೂ ಇವು ಯಾವುವೂ ತಮ್ಮಿಂದ ತಾವೇ ಮೋಕ್ಷವನ್ನು ತರಲಾರವು. **ಈಶ್ವರನ ಪ್ರೀತಿ** ಒಂದೇ ಮೋಕ್ಷಸಾಧನ.

೨೦. ಮೋಕ್ಷಕ್ಕೆ **ಅರ್ಥಪಂಚಕ** ತತ್ತ್ವಜ್ಞಾನ ಅಗತ್ಯ. ಆ ಜ್ಞಾನವು ಬರಬೇಕಾದರೆ ಸಾತ್ವಿಕಶಾಸ್ತ್ರ ಪ್ರವೇಶ ಬೇಕು. ಅಂತಹ ಸತ್ವಗುಣವು ಈಶ್ವರನ ಜಾಯಮಾನಕಟಾಕ್ಷದಿಂದ ಮಾತ್ರ ಸಾಧ್ಯ. (ಇದಕ್ಕೆ ಆಚಾರ್ಯಾಭಿಮಾನ ಸುಲಭವಾದ ದಾರಿ.)

೨೧. ತತ್ತ್ವನಿರೂಪಣೆ ಮಾಡುವ ತಂತ್ರಗಳು— **ಸಾಂಖ್ಯ, ಯೋಗ, ಪಾಶುಪತ** ಮತ್ತು **ಶ್ರೀ ಪಾಂಚರಾತ್ರ** ಎಂಬವು. ಇವುಗಳಲ್ಲಿ ಶ್ರೀ ಪಾಂಚರಾತ್ರವೊಂದೇ ಸರ್ವಾಂಶದಲ್ಲೂ ವೇದಾಂತಾನುಗುಣವಾಗಿರುವುದು.

೨೨. ಈಶ್ವರ ತತ್ತ್ವವನ್ನು ತಿಳಿಯುವುದಕ್ಕೆ ವಿಷಯವೈರಾಗ್ಯ ಅಗತ್ಯ. **ವಿಷಯವೈರಾಗ್ಯ**ವೆಂದರೆ ವಿಷಯಗಳನ್ನು ತ್ಯಜಿಸುವುದಲ್ಲ, ವಿಷಯಗಳನ್ನು ನಾಶಮಾಡುವುದಲ್ಲ; ಸ್ವ-ಸ್ವಾಮಿ ಸಂಬಂಧವನ್ನು ಮರೆಯದೆ, ವರ್ಣಾಶ್ರಮಧರ್ಮಗಳಿಗನುಸಾರವಾಗಿ ವಿಷಯಗಳನ್ನು ಅನುಭವಿಸುವುದು. ಇಂತಹ ವಿಷಯವಿರಕ್ತಿಯೇ ಭಕ್ತಿಗೆ ಮೂಲಕಾರಣ.

## ೭. ಕರ್ಮ-ಸಂಸಾರ ಸಂಬಂಧ

೨೩. ಶರೀರವನ್ನು ಪಡೆದ ಜೀವ **ಕರ್ಮ** ಮಾಡುತ್ತದೆ. ಕರ್ಮಗಳಲ್ಲಿ **ಪಾಪ, ಪುಣ್ಯ** ಎಂದು ಎರಡು ತೆರ. **ಪುಣ್ಯ**ದಲ್ಲಿ **ನಿತ್ಯ, ಕಾಮ್ಯ** ಎಂದು ಮತ್ತೆ ಎರಡು ತೆರ. ಮುಕ್ತಿಯನ್ನು ಬಯಸುವವರು ಪಾಪಕರ್ಮವನ್ನೂ ಕಾಮ್ಯಕರ್ಮವನ್ನೂ ತೊರೆದು, ನಿತ್ಯಕರ್ಮದಲ್ಲಿ ನಿರತರಾಗತಕ್ಕದ್ದು ಶ್ರೇಯಸ್ಸು.

೨೪. **ಅವಿದ್ಯೆ**ಯಿಂದ ನಡೆಸಿದ **ಕರ್ಮ**ವು ಜೀವಕ್ಕೆ ಪ್ರಕೃತಿ ಸಂಬಂಧವನ್ನು ಕೊಟ್ಟು **ಸಂಸಾರಚಕ್ರ**ದಲ್ಲಿ ಸಿಕ್ಕಿಸುತ್ತದೆ. ಭಗವಂತನ ದಯೆಯಿಂದ ಮಾತ್ರ ಈ ಕೆಟ್ಟಕರ್ಮ ಕಳೆದುಹೋಗಲು ಸಾಧ್ಯ.

## ೮. ಪ್ರಪತ್ತಿಯ ಪಾರಮ್ಯ

೨೫. ಕೇವಲ ಕರ್ಮದಿಂದಾಗಲಿ, ದೇವತಾಂತರಗಳಿಂದಾಗಲಿ, ಗ್ರಹಾನುಕೂಲ್ಯದಿಂದಾಗಲಿ, ಪುರುಷಪ್ರಯತ್ನದಿಂದಾಗಲಿ ಮುಕ್ತಿಯು ದೊರಕದು. ಸರ್ವರ ಯೋಗಕ್ಷೇಮಗಳನ್ನು ವಹಿಸಿರುವ ಈಶ್ವರನಲ್ಲಿ **ಪ್ರಪತ್ತಿ**ಯನ್ನು ಮಾಡಿದರೆ ಮಾತ್ರ ಮುಕ್ತಿ.

೨೬. ದೇವತಾಂತರಗಳಾಗಲಿ, ಬಂಧು ಬಾಂಧವರಾಗಲಿ, ಧನಧಾನ್ಯಗಳಾಗಲಿ ಜೀವಿಯನ್ನು ಕಾಪಾಡಲಾರವು. ಈಶ್ವರನ ಮೆಲ್ಲಡಿಗಳೇ **ಉಪಾಯ,** ಅವೇ **ಉಪೇಯ.** ಮಾರ್ಗವೂ ಅವೇ, ಗುರಿಯೂ ಅವೇ.

೨೭. ಈಶ್ವರನ ವಾತ್ಸಲ್ಯ ಅಪಾರವಾದದ್ದು. ಸ್ವಾಮಿಯಾದವನು ತನ್ನ ಸ್ವತ್ತು ನಾಶವಾಗಲು ಅವಕಾಶಕೊಡುವುದಿಲ್ಲ. ಈ ಜ್ಞಾನವೇ ನಮಗೆ ದೊಡ್ಡ ಅಭಯ, ದೊಡ್ಡ ಧೈರ್ಯ.

೨೮. ಜೀವಾತ್ಮರು **ನಿತ್ಯ**ರಾಗಿರಲಿ, **ಮುಕ್ತ**ರಾಗಿರಲಿ, **ಬದ್ಧ**ರಾಗಿರಲಿ—ಸಕಲ ಆತ್ಮವರ್ಗದಲ್ಲೂ ಈಶ್ವರನು ದಯಾಳು.

೨೯. **ಪರ**ನಾಗಿದ್ದ ಈಶ್ವರನು ಭಕ್ತಜೀವರ ಅನುಗ್ರಹಕ್ಕಾಗಿ **ವಿಗ್ರಹ**ವನ್ನು ಪಡೆದರೂ ಆದರಿಂದ ಅವನಿಗೆ ದೋಷ ತಾಕುವುದಿಲ್ಲ.

೩೦. ಇಂತಹ ನಿರವದ್ಯವಾದ **ಶ್ರೀ ದಿವ್ಯಮಂಗಳವಿಗ್ರಹ**ವಾಗಿ ಬಂದು ಯದುಗಿರಿಯಲ್ಲಿ ನೆಲಸಿರುವ ಯತಿರಾಜಕುಮಾರನಿಗೆ ಊಳಿಗ ಮಾಡುವುದಕ್ಕಿಂತ ಹೆಚ್ಚಿನ ಆನಂದವಿಲ್ಲ.

## ಅರ್ಥಪಂಚಕ ತತ್ತ್ವಜ್ಞಾನ*

[ಇಲ್ಲಿನ ವಿವರಗಳೊಂದಿಗೆ ಅಡಿಟಿಪ್ಪಣಿಯಲ್ಲಿ ಸೂಚಿಸಿರುವುದನ್ನು ನೋಡಿ.]

ಸಂಸಾರದಲ್ಲಿ ಸಿಕ್ಕಿ ಭ್ರಮಿಸುತ್ತಿರುವ ಜೀವನು ಹುಟ್ಟು-ಸಾವುಗಳನ್ನು ದಾಟಿ ಮುಕ್ತಿ ಪಡೆಯಬೇಕಾದರೆ ಈ ಅರ್ಥಪಂಚಕ ತತ್ತ್ವಜ್ಞಾನ ಅವಶ್ಯಕ. ಈ ಐದು ಯಾವುವೆಂದರೆ:

**೧. ಸ್ವ-ಸ್ವರೂಪ ಜ್ಞಾನ**

**೨. ಪರ-ಸ್ವರೂಪ ಜ್ಞಾನ**

**೩. ಪುರುಷಾರ್ಥ-ಸ್ವರೂಪ ಜ್ಞಾನ**

**೪. ಉಪಾಯ-ಸ್ವರೂಪ ಜ್ಞಾನ**

**೫. ವಿರೋಧಿ-ಸ್ವರೂಪ ಜ್ಞಾನ.**

### ೧. ಸ್ವ-ಸ್ವರೂಪ ಜ್ಞಾನ†

ಸ್ವ-ಸ್ವರೂಪ ಎಂದರೆ ಜೀವದ ಸ್ವರೂಪ. ಸ್ವರೂಪ ಎಂದರೆ ಸ್ವಭಾವ, ರೀತಿ, ಗುಣ.

**ಜೀವಗಳು ಐದು ತೆರ: ನಿತ್ಯ, ಮುಕ್ತ, ಬದ್ಧ, ಕೇವಲ** ಮತ್ತು **ಮುಮುಕ್ಷು.**

**ನಿತ್ಯರು** ಎಂದೂ ಸಂಸಾರಕ್ಕೆ ಸಿಕ್ಕದ ಜೀವಗಳು. ಪರಮಾತ್ಮನ ಕೃಪೆಗೆ ಸದಾ ಪಾತ್ರರಾಗಿ, ಎಲ್ಲಕಾಲಕ್ಕೂ ಶ್ರೀವೈಕುಂಠದಲ್ಲಿ ಭಗವಂತನ ಸನ್ನಿಧಿಯಲ್ಲೇ ಇರುವವರು. ಭೂಮಿಯಲ್ಲಿ ಭಗವಂತನ ಅವತಾರ ಆದಂತೆ, ಆತನೊಡನೆ ತಾವೂ ಅವತಾರಮಾಡಿ, ಆತನ ಲೀಲೆಗಳಲ್ಲಿ ಸಹಭಾಗಿಯಾಗುವವರು. ಅನಂತ, ಗರುಡ, ವಿಷ್ವಕ್ಸೇನ ಮುಂತಾದವರು ಇಂತಹ ನಿತ್ಯರು.

---

*ಬಿನ್ನಪ ೨೦. † ಬಿನ್ನಪ ೨೮.

**ಮುಕ್ತರು** ಸಂಸಾರಕ್ಕೆ ಸಿಕ್ಕಿದ್ದು, ಭಗವಂತನ ಕೃಪಾಕಟಾಕ್ಷ ದಿಂದ ತಮ್ಮ ಕರ್ಮಾನುಭವಗಳನ್ನೆಲ್ಲ ಕಳೆದುಕೊಂಡು, ಭಗವಂತನ ಸನ್ನಿಧಿಯನ್ನು ಸೇರಿದ ಜೀವಗಳು. ಭಗವಂತನ ಸ್ವರೂಪ-ರೂಪ-ಗುಣ-ವಿಭವಗಳನ್ನು ಸಂಕೀರ್ತನೆಮಾಡುತ್ತಾ ನಿರವಧಿಕವಾದ ಆನಂದದಿಂದ ಶ್ರೀ ವೈಕುಂಠದಲ್ಲಿ ಇರುವ ಜೀವಗಳು. ಈ ಜೀವಗಳಿಗೆ ಮತ್ತೆ ಸಂಸಾರ ಎಂಬುದು ಇಲ್ಲ.

**ಬದ್ಧರು** ಭಗವಂತನಿಂದ ವಿಮುಖರಾಗಿ ಸಂಸಾರದಲ್ಲಿ ತೊಳಲು ತ್ತಲಿರುವ ಜೀವಗಳು. ದೇಹವನ್ನೇ ಆತ್ಮವೆಂದು ಭ್ರಮಿಸಿ, ಅಥವಾ ವಿಷ ಯೋಪಭೋಗಗಳೇ ಪರಮಪುರುಷಾರ್ಥವೆಂದು ಭ್ರಮಿಸಿ, ವರ್ಣಾಶ್ರಮ ಧರ್ಮಗಳಿಗೆ ವಿರುದ್ಧವಾಗಿ ನಡೆದು, ಈ ಜೀವಗಳು ಯಾವ ಹಿಂಸೆಗೂ ಯಾವ ಅನ್ಯಾಯಕ್ಕೂ ಹೇಸುವುದಿಲ್ಲ.

**ಕೇವಲರು** ಸಂಸಾರದಿಂದ ತಪ್ಪಿಸಿಕೊಳ್ಳಲು ಹಂಬಲಿಸಿ, ಅಚಿತ್ ಎನಿಸಿದ ಇಪ್ಪತ್ತನಾಲ್ಕು ತತ್ತ್ವಗಳಿಗೆ ಮೇಲೆ ಚಿತ್ ಎಂಬ ಇಪ್ಪತ್ತೈದ ನೆಯ ಜೀವತತ್ತ್ವ ಉಂಟು ಎಂಬುದನ್ನು ಜ್ಞಾನಯೋಗದಿಂದ ಕಂಡು ಕೊಂಡು, ಆ ಸ್ವ-ಸ್ವರೂಪಜ್ಞಾನವನ್ನು ಪಡೆದು ಆನಂದಪಡುವವರು. ಇವರು ಜೀವಾತ್ಮನಿಗಿಂತ ಮೇಲೆ ಪರಮಾತ್ಮನು ಇರುವನೆಂದು ಅರಿ ಯದೆ, ಆ ಪರ-ಸ್ವರೂಪಜ್ಞಾನದಿಂದಾಗುವ ಆನಂದವನ್ನು ಪಡೆಯಲು ಆಶಿಸದೆ, ತಮ್ಮ ಅಲ್ಪಾನಂದದಲ್ಲಿಯೇ ತೃಪ್ತರಾದವರು.

**ಮುಮುಕ್ಷುಗಳು**—ಮುಕ್ತಿಯನ್ನು ಬಯಸುವ ಜೀವಗಳು. ಇವರಲ್ಲಿ **'ಉಪಾಸಕ'**ರೆಂದೂ **'ಪ್ರಪನ್ನ'**ರೆಂದೂ ಎರಡು ವಿಧ. ಉಪಾ ಸಕರು ಸ್ವಪ್ರಯತ್ನದಿಂದ ಭಗವಂತನ ಸನ್ನಿಧಿಗೆ ಸೇರಲು ಯತ್ನಿಸುವ ವರು—(ಕೋತಿಯಮರಿ ತಾಯಿಕೋತಿಯನ್ನು ತಾನು ತಬ್ಬಿ ಹಿಡಿದ ಹಾಗೆ.) ಪ್ರಪನ್ನರು—ತಮ್ಮನ್ನು ತನ್ನ ಸನ್ನಿಧಿಗೆ ಎತ್ತಿಕೊಳ್ಳುವ ಭಾರ ವನ್ನು ಭಗವಂತನಿಗೇ ಒಪ್ಪಿಸಿದವರು— (ತಾಯಿಬೆಕ್ಕು ತನ್ನ ಮರಿ ಯನ್ನು ತಾನು ಕಚ್ಚಿಹಿಡಿದು ಕರೆದೊಯ್ಯುವ ಹಾಗೆ.)

## ೨. ಪರ-ಸ್ವರೂಪ ತತ್ತ್ವಜ್ಞಾನ*

ಈ **ಪರ** ಎಂಬ ಈಶ್ವರತತ್ತ್ವದ ಪ್ರಕಾರಗಳು ಐದು: **ಪರ, ವ್ಯೂಹ, ವಿಭವ, ಅಂತರ್ಯಾಮಿ** ಮತ್ತು **ಅರ್ಚಾ.**

ಈಶ್ವರನು **ಪರ** ಎಂಬ ರೂಪದಲ್ಲಿ ಶ್ರೀವೈಕುಂಠದಲ್ಲಿ ಇರುತ್ತಾನೆ. ಈ ಪರ ಎಂಬುದರಿಂದಲೇ ಸಮಸ್ತ ಸೃಷ್ಟಿಯೂ, ಅದರ ಸ್ಥಿತಿಯೂ. ಸಮಸ್ತ ಸೃಷ್ಟಿಯ ಲಯವೂ ಈ ಪರದಲ್ಲಿಯೇ.

**ವ್ಯೂಹ** ಎಂಬುದು ಈಶ್ವರನಿಂದ ಸೃಷ್ಟಿಯಾದ ಬ್ರಹ್ಮಾಂಡದಲ್ಲಿನ ಬೇರೆಬೇರೆ ಭುವನಗಳನ್ನು ಆಳುವುದಕ್ಕಾಗಿ **ಪರ**ದಿಂದಲೇ ಪ್ರಭವಿಸಿದ ಪ್ರದ್ಯುಮ್ನ, ಅನಿರುದ್ಧ, ಸಂಕರ್ಷಣ ಮೊದಲಾದ ಅಸಂಖ್ಯವಾದ ದೇವತಾಂತರ ರೂಪಗಳು.

**ವಿಭವ** ಎಂಬುದು ಭೂಮಂಡಲದಲ್ಲಿ ಇರುವ ಮನುಷ್ಯರಿಗೂ ತಿರ್ಯಕ್ಕುಗಳಿಗೂ ಅನುಗ್ರಹಮಾಡಬೇಕೆಂದು ಅದೇ ಪರತತ್ತ್ವವು ರಾಮ ಕೃಷ್ಣ ಮೊದಲಾದ ಅವತಾರಗಳನ್ನು ತಾಳಿ ಬಂದದು.

**ಅಂತರ್ಯಾಮಿ** ಎಂದರೆ, ಜೀವಾತ್ಮನಿಗೆ ಕರಣಕಳೇಬರಾದಿಗಳನ್ನು ಕರುಣಿಸಿದ ಅದೇ ಪರತತ್ತ್ವವು ಸರ್ವಚೇತನಾಚೇತನವರ್ಗದಲ್ಲಿ ಒಳಗೇ ವ್ಯಾಪಿಸಿಕೊಂಡಿದ್ದು, ಜೀವಿಗಳ ಮನೋವಾಕ್ಕಾಯಗಳನ್ನು ಪ್ರೇರಿಸುತ್ತ, ಅವರ ಪ್ರವೃತ್ತಿನಿವೃತ್ತಿಗಳನ್ನು ಗಮನಿಸಿತಿದ್ದುತ್ತಿರುವುದು.

**ಅರ್ಚಾ** ಎಂದರೆ ಭಗವಂತನ ವಿಗ್ರಹಗಳು. ಇದಕ್ಕೆ ಇಂಥದೇ ಎಂಬ ನಿಯತವಾದ ಆಕಾರವಿಲ್ಲ, ನಿಶ್ಚಿತವಾದ ಹೆಸರಿಲ್ಲ. ಅರ್ಚಕನಿಗೆ ಇಷ್ಟವಾದ ರೂಪವೂ ಆಗಬಹುದು, ಇಷ್ಟವಾದ ಹೆಸರೂ ಆಗಬಹುದು. ಇದು ನೋಡಿದರೆ—ಅರ್ಚಾವಿಗ್ರಹವು ಅಸಹಾಯವಾಗಿ ಅರ್ಚಕನನ್ನು ಅವಲಂಬಿಸಿ ಇರುವಂತೆ ತೋರಿದರೂ ವಾಸ್ತವ ಹಾಗಲ್ಲ. ಅರ್ಚಕನು ಮನೆಯಲ್ಲೂ ದೇವಾಲಯದಲ್ಲೂ, ಎಲ್ಲಿ ಎಂದರೆ ಅಲ್ಲಿ, ಯಾವಾಗ ಎಂದರೆ ಆವಾಗ, ತನಗೆ ಸಂತೋಷಕೊಡುವ ರೂಪದಲ್ಲಿ ಈಶ್ವರನನ್ನು

* ಬಿನ್ನಪ ೧ರಿಂದ; ೨೭, ೨೯, ೩೦.

ಕಣ್ಣಾರೆ ಕಾಣಲಾಗುವಂತೆ ಅದೇ ಈಶ್ವರನೇ ಕರುಣೆಯಿಂದ ಅನುಗ್ರಹ ಮಾಡಿದ್ದೇ ಈ ಅಚಾರ್ಯರೂಪ.

## ೩. ಪುರುಷಾರ್ಥ-ಸ್ವರೂಪ ತತ್ತ್ವಜ್ಞಾನ*

ಪುರುಷಾರ್ಥಗಳು, ಎಂದರೆ ಜೀವಿಯು ಬಯಸಿ ಪಡೆಯಬೇಕಾದ ಗುರಿಗಳು. ಇವು ಐದು: **ಧರ್ಮ, ಅರ್ಥ, ಕಾಮ, ಆತ್ಮಾನುಭವ** ಮತ್ತು **ಭಗವದನುಭವ.** ಕೊನೆಯ ಎರಡನ್ನೂ **ಮೋಕ್ಷ** ಎಂದೇ ವ್ಯವಹರಿಸುವುದಾದರೂ, ಭಗವದನುಭವವನ್ನೇ **ಪರಮಪುರುಷಾರ್ಥ** ಎನ್ನುವರು.

**ಧರ್ಮ** ಎಂಬುದು ಸಕಲ ಜೀವಗಳ ಹಿತಕ್ಕಾಗಿ ಆಚರಿಸುವಂಥ ಸತ್ಕಾರ್ಯಗಳು. ಈಶ್ವರ, ಚಿತ್, ಅಚಿತ್ ಎಂಬ ಮೂರೂ ತತ್ತ್ವಗಳಲ್ಲಿ ಸಾಮರಸ್ಯವನ್ನು ಸಾಧಿಸುವುದೆಲ್ಲಾ ಧರ್ಮ. ಅದು ಇಲ್ಲದ್ದು ಅಧರ್ಮ.

**ಅರ್ಥ** ಎಂಬುದು— ವರ್ಣಾಶ್ರಮಧರ್ಮಕ್ಕೆ ಅನುಸಾರವಾಗಿ ನಡೆದು ಸಂಪಾದಿಸಿದ ಧನ ಧಾನ್ಯ ಮುಂತಾದುವು. ಹೀಗೆ ಸಂಪಾದನೆ ಮಾಡಿದ್ದನ್ನು ಪಾತ್ರಾಪಾತ್ರವರಿತು, ಕಾಲದೇಶವರ್ತಮಾನಗಳನ್ನು ತಿಳಿದು ವಿನಿಯೋಗಿಸಿದಾಗ ಅದಕ್ಕೆ **ಅರ್ಥ** ಎಂಬ ಹೆಸರು ಸಾರ್ಥಕ.

**ಕಾಮ** ಎಂದರೆ ಆಶಿಸಿದ್ದನ್ನು ಪಡೆದು ಹೊಂದುವ ಸಂತೋಷ. ಇದರಲ್ಲಿ ಎರಡು ವಿಧ. ಒಂದು—ಭೂಮಿಯಲ್ಲಿ ಇಂದ್ರಿಯ ವಿಷಯಗಳಾದ ವಸ್ತುಗಳನ್ನು ಪಡೆದು ಪಡುವ ಲೌಕಿಕ ಸುಖ; ಇನ್ನೊಂದು— ಮರಣಾನಂತರ ಸ್ವರ್ಗಾದಿ ಭೂಮಿಗಳಲ್ಲಿ ಪಡುವ ಅಲೌಕಿಕವಾದ ಸುಖ. ಈ ಎರಡು ರೀತಿಯ ಸುಖಗಳೂ ಅನಿತ್ಯವಾದುವು.

**ಆತ್ಮಾನುಭವ** ಎಂಬುದು ಸಂಸಾರವನ್ನೂ ಅದರ ದುಃಖಗಳನ್ನೂ ತಪ್ಪಿಸಿಕೊಂಡದ್ದರಿಂದ ಬರುವ ಮುಕ್ತಿ. ಇದನ್ನೇ **ಕೈವಲ್ಯ** ಎನ್ನುತ್ತಾರೆ. ಇಂಥ **ಮೋಕ್ಷ**ವನ್ನು ಪಡೆದವರು ಕೇವಲಿಗಳು.

---

*ಬಿನ್ನಪ ೧೬, ೧೯.

**ಭಗವದನುಭವ** ಎಂಬುದೇ ನಿಜವಾದ **ಮೋಕ್ಷ.** ಇದು ಆತ್ಮಾನುಭವಕ್ಕೂ ಮೀರಿದ್ದು. ಆತ್ಮಾನುಭವದಲ್ಲಿ ಜೀವಾತ್ಮನ ನಿಜಸ್ವರೂಪ ದರ್ಶನವಾಗಿ ಆನಂದ ಅಷ್ಟೇ ಮಿತಿಯಲ್ಲಿ ನಿಂತರೆ, ಭಗವದನುಭವದಲ್ಲಿ ಪರಮಾತ್ಮನ ನಿಜಸ್ವರೂಪ ದರ್ಶನವಾಗಿ ಆನಂದ ಅಮಿತವೂ ನಿರವಧಿಕವೂ ಆಗುತ್ತದೆ.

ಇದು ಆಗುವಾಗ, ಭಗವಂತನ ಕರುಣೆಯಿಂದ ಜೀವನ ಪುಣ್ಯಪಾಪಕರ್ಮಗಳೆಷ್ಟೂ ವಾಸನಸಹಿತವಾಗಿ ನಾಶವಾಗುವುದು. ಸುಖದುಃಖಗಳನ್ನು ಅನುಭವಿಸುವ ದೇಹವೂ ನಿರ್ಮೂಲವಾಗುವುದು. (ಜನ್ಮ ವೃದ್ಧಿ ಜರಾ ಮರಣಗಳಿಗೆ ಕಾರಣವಾದ ದೇಹವಿದ್ದುದರಿಂದ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ ಎಂಬ ತಾಪತ್ರಯಗಳಿಗೆ ಜೀವನು ಒಳಗಾಗಿ, ಅದರ ಫಲವಾದ ಅವಿದ್ಯೆಯಿಂದ ಪರಮಾತ್ಮನನ್ನು ಕಾಣದೆ ಸಂಸಾರದಲ್ಲಿ ತೊಳಲಾಡುತ್ತಿತ್ತಷ್ಟೆ.) ಈಗ ಅಂತಹ ದೇಹವನ್ನು ನೀಗಿಕೊಂಡ ಜೀವಾತ್ಮನು ಸುಷುಮ್ನಾನಾಡಿಯನ್ನು ಪ್ರವೇಶಿಸಿ, ಶಿರಸ್ಸಿಗೆ ಏರಿ, ಬ್ರಹ್ಮರಂಧ್ರವನ್ನು ಭೇದಿಸಿಕೊಂಡು, ಸೂಕ್ಷ್ಮಶರೀರಿಯಾಗಿ, ಅರ್ಚಿರಾದಿಮಾರ್ಗವನ್ನು ಹಿಡಿದು. ಸೂರ್ಯಮಂಡಲವನ್ನೂ ಭೇದಿಸಿಕೊಂಡು, ಭೌತಪ್ರಕೃತಿಯ ಅಂಚಿನಲ್ಲಿರುವ ವಿರಜಾನದಿಯ ದಡವನ್ನು ಸೇರುವುದು. ಜೀವಾತ್ಮನು ಅಲ್ಲಿ ಆ ನದಿಯಲ್ಲಿ ಮುಳುಗಿ, ತನ್ನ ಸೂಕ್ಷ್ಮಶರೀರವನ್ನೂ ಕಳೆದುಕೊಳ್ಳುವುದು. ಆಗ ಆ ವಿಶುದ್ಧವಾದ ಜೀವಾತ್ಮನನ್ನು 'ಅಮಾನವ'ನೆಂಬ ಅಪಾರ್ಥಿವವಾದ ಒಂದು ದಿವ್ಯ ತೇಜೋರೂಪವು ಕೈಹಿಡಿಯುವುದು. ಆಗ ಆ ಜೀವಾತ್ಮನಿಗೆ ಒಂದು ತೇಜೋರೂಪ ಉಂಟಾಗುವುದು. ದೇವಸೇವೆಗೆ ಮಾತ್ರ ಅರ್ಹವಾದ ಇಂತಹ ರೂಪವನ್ನು ಪಡೆದ ಜೀವ ಇನ್ನು ಭಗವಂತನ ಸನ್ನಿಧಿಗೆ ಬರುವುದು. ಅದೇ ಶ್ರೀವೈಕುಂಠ. ಅಲ್ಲಿ ವೈಕುಂಠನಾಥನಾದ ಪರವಾಸುದೇವನು ಶ್ರೀ ಭೂ ನೀಳಾದೇವಿಯರಿಂದಲೂ ನಿತ್ಯಮುಕ್ತರುಗಳಿಂದಲೂ ಸೇವಿತನಾಗಿ ಪರಮವೈಭವದಲ್ಲಿರುವನು. ಅಲ್ಲಿನ ನಿತ್ಯವೂ ನಿರವಧಿಕವೂ ಆದ ಆನಂದದಲ್ಲಿ ಜೀವನು ತಾನೂ ಭಾಗಿಯಾಗುವುದು. ಇದೇ ಭಗವದನುಭವವೆಂಬ **ಮೋಕ್ಷ.**

## ೪. ಉಪಾಯ-ಸ್ವರೂಪ ತತ್ತ್ವಜ್ಞಾನ*

ಮೋಕ್ಷವನ್ನು ಪಡೆಯುವುದಕ್ಕೆ ಉಪಾಯಗಳು ಐದು: **ಕರ್ಮ, ಜ್ಞಾನ, ಭಕ್ತಿ, ಪ್ರಪತ್ತಿ** ಮತ್ತು **ಆಚಾರ್ಯಾಭಿಮಾನ.**

**ಕರ್ಮ** ಎಂಬುದು ಪಾಪವನ್ನು ಮಾಡದ ಹಾಗೆ ದೇಹವನ್ನು ರಕ್ಷಿಸಿ ನಡಸುವ ಕೆಲಸಗಳು. ಯಜ್ಞ, ದಾನ, ತಪಸ್ಸು, ಧ್ಯಾನ, ಸಂಧ್ಯಾವಂದನ, ಪಂಚ ಮಹಾಯಜ್ಞ, ಅಗ್ನಿಹೋತ್ರ, ತೀರ್ಥಯಾತ್ರಾ, ಪುಣ್ಯಕ್ಷೇತ್ರ ವಾಸ, ಕೃಚ್ಛ್ರ ಮತ್ತು ಚಾಂದ್ರಾಯಣ, ಪುಣ್ಯನದೀಸ್ನಾನ, ವ್ರತ, ಚಾತುರ್ಮಾಸ್ಯ, ಫಲಮೂಲಾಶನ, ಶಾಸ್ತ್ರಾಭ್ಯಾಸ, ಸಮಾರಾಧನ, ಜಪ, ತರ್ಪಣ—ಇವೆಲ್ಲಾ ಕರ್ಮಗಳು. ಇದರಿಂದ ಜ್ಞಾನೇಂದ್ರಿಯ ಗಳೂ ಕರ್ಮೇಂದ್ರಿಯಗಳೂ ಸಂಯಮವನ್ನು ಪಡೆದು, ವಿಷಯಗಳಿಂದ ವಿಮುಖವಾಗುತ್ತವೆ. ಆಗ ಜೀವಾತ್ಮ ಪರಮಾತ್ಮನ ಕಡೆಗೆ ತಿರುಗುತ್ತದೆ. ಇದು 'ಯೋಗ.'

ಕರ್ಮಯೋಗವನ್ನೂ ಜ್ಞಾನಯೋಗವನ್ನೂ ಆಶ್ರಯಿಸಿದವರು ಅರ್ಥ ಕಾಮಗಳನ್ನು ಮಾತ್ರ ಪಡೆಯುತ್ತಾರೆ.

**ಜ್ಞಾನ** ಎಂದರೆ ಅಧ್ಯಾತ್ಮಜ್ಞಾನ. ಜ್ಞಾನಯೋಗವೆಂದರೆ ಅದನ್ನು ಪಡೆಯುವುದು. ಭಗವಂತನನ್ನು ಸೂರ್ಯಮಂಡಲದ ಮಧ್ಯದಲ್ಲಿಯೋ ಹೃತ್ಕಮಲಮಧ್ಯದಲ್ಲಿಯೋ ಶಂಖಚಕ್ರಗದಾ ಸಹಿತನಾಗಿ, ಪೀತಾಂಬರ ಧಾರಿಯಾಗಿ, ಶ್ರೀಸಮೇತನಾಗಿ, ಅನಿರ್ವಚನೀಯವಾದ ಸೌಂದರ್ಯದಿಂದ ಕೂಡಿದಂತೆ ಕಂಡುಕೊಳ್ಳುವುದೇ ಜ್ಞಾನಯೋಗದ ಗುರಿ.

ಜ್ಞಾನಯೋಗವು ಭಕ್ತಿಯೋಗದೊಡನೆ ಕೂಡಿದಾಗ, ಕೈವಲ್ಯ ವೆಂಬ ಮೋಕ್ಷ ಸಿದ್ಧಿಯಾಗುತ್ತದೆ.

**ಭಕ್ತಿ** ಎಂಬುದು ಪ್ರೇಮವಿಶೇಷ. ಭಕ್ತಿಯೋಗವೆಂದರೆ ಭಗ ವಂತನಲ್ಲಿ ಪ್ರೇಮವನ್ನು ಬೆಳಸುವುದು. ಜ್ಞಾನಯೋಗದಿಂದ ಭಗ ವಂತನನ್ನು ಮನಸಾ ಕಂಡುಕೊಂಡ ಮೇಲೆ, ಭಕ್ತಿಯೋಗದಿಂದ ಭಗವಂತನನ್ನು ಹೃದಯಕ್ಕೆ ಆಕರ್ಷಿಸಿಕೊಳ್ಳುವುದೇ ಭಕ್ತಿಯೋಗದ

---

*ಬಿನ್ನಪ ೧೯ ರಿಂದ ೪೦.

ಆಧಿಕ್ಯ. ಈ ಭಕ್ತಿ ತೀವ್ರವಾದಂತೆಲ್ಲಾ ಭಗವಂತನು ಹತ್ತಿರ ಹತ್ತಿರ ವಾಗುತ್ತಾನೆ.

ಪುಣ್ಯವು ಭಗವಂತನ ಒಲವನ್ನು ಸಂಪಾದಿಸುತ್ತದೆ, ಪಾಪವು ಭಗವಂತನ ಮುನಿಸನ್ನು ಪಡೆಯುತ್ತದೆ. ಈ ಪಾಪದಲ್ಲಿ ಮೂರು ತೆರ: ಸಂಚಿತ(ಕಣಜದಲ್ಲಿ ಕೂಡಿಟ್ಟ ಕಾಳಿನಂತಹದು), ಪ್ರಾರಬ್ಧ (ಅಂದಂದಿನ ಬಳಕೆಗಾಗಿ ಕಣಜದಿಂದ ತೆಗೆದ ಕಾಳಿನಂತಹದು) ಮತ್ತು ಆಗಾಮಿ (ಮುಂದೆ ಕುಯಿಲು ಮಾಡುವುದಕ್ಕಾಗಿ ಈಗ ಬಿತ್ತಿದ ಕಾಳಿನಂತಹದು; ಮುಂದೆ ಸಂಚಿತಕ್ಕೆ ಸೇರತಕ್ಕದ್ದು.) ಇವುಗಳಲ್ಲಿ ಮೂರು ಯೋಗಗಳೂ ಪಾಪವನ್ನು ನಾಶ ಮಾಡುವುವಾದರೂ, ಕರ್ಮ ಮತ್ತು ಜ್ಞಾನಯೋಗ ಗಳು ಮುಟ್ಟದೆ ಬಿಟ್ಟ ಪಾಪದ ಅವಶೇಷವನ್ನು ಭಕ್ತಿಯೋಗ ಸಂಪೂರ್ಣ ವಾಗಿ ನಾಶಮಾಡಿಬಿಡುತ್ತದೆ. ಆದ್ದರಿಂದಲೇ ಭಕ್ತಿಯು ಕರ್ಮಜ್ಞಾನ ಗಳಿಗಿಂತ ಮೇಲಾದದ್ದು ಎಂದು ಹೇಳುವರು.

**ಪ್ರಪತ್ತಿ** ಎಂಬುದು ಪರಮಾತ್ಮನಿಗೆ ತನ್ನನ್ನು ಅನನ್ಯಭಕ್ತಿಯಿಂದ ಪರಿಪೂರ್ಣಪ್ರೇಮದಿಂದ ಅರ್ಪಿಸಿಕೊಳ್ಳುವುದು. ಭಕ್ತಿಯೋಗದಲ್ಲಿ ಸ್ವಪ್ರಯತ್ನ ಮುಖ್ಯ; ಪ್ರಪತ್ತಿಯೋಗದಲ್ಲಿ ಭಗವಂತನ ಕರುಣೆ ಮುಖ್ಯ. ತನ್ನ ಯೋಗಕ್ಷೇಮದ ಪರಿಪಾಲನವನ್ನು ಭಗವಂತನಿಗೆ ವಹಿಸುವುದು —ಇದೇ ನಿಜವಾದ ಸಂನ್ಯಾಸ.

ಮೇಲೆ ಹೇಳಿದ ಕರ್ಮಜ್ಞಾನಯೋಗಗಳಿಂದ ಕೂಡಿದ ಭಕ್ತಿ ಯೋಗ ಕಷ್ಟಸಾಧ್ಯವಾದ್ದರಿಂದ, ಅದು ಎಲ್ಲರೂ ಅನುಸರಿಸಿ ಮುಕ್ತಿ ಪಡೆಯುವಂತಿಲ್ಲ. ಆದರೆ ಈ ಪ್ರಪತ್ತಿಮಾರ್ಗವು ಎಲ್ಲರೂ ಆಚರಿಸಬಹು ದಾದಂಥದು—ಅವರು ಯಾವ ವರ್ಣದವರಾಗಲಿ, ಯಾವ ಆಶ್ರಮದವ ರಾಗಲಿ. 'ನೀನೇ ಗತಿ' ಎಂದು ಮನಸ್ಸುಮಾಡಿ, ತಾನು ಮಾಡಿದುದೆಲ್ಲಾ ಆತನಿಗೇ ಅರ್ಪಣೆ ಎಂದು ಕರ್ಮ ಮಾಡುವವನಿಗೆ, ಈ ಕರ್ಮ ಉಪಾಯ ಮಾತ್ರವಲ್ಲ ಅದೇ ಉಪೇಯವೂ ಆಗುತ್ತದೆ. ಈ ಶರಣಾಗತಿ, ಸ್ವಾರ್ಥ ವಿಲ್ಲದ ಈ ಭಗವತ್‌ಕೈಂಕರ್ಯ, ಪ್ರಪನ್ನನನ್ನು ಭಗವಂತನ ಪಾದಗಳ ಬಳಿಗೆ ಒಯ್ಯುತ್ತದೆ. ಭಕ್ತಿಯಲ್ಲಿರುವ 'ನಾನು ಒಪ್ಪಿಸುತ್ತೇನೆ' ಎಂಬ ಭಾವವು ಪ್ರಪತ್ತಿಯಲ್ಲಿ 'ಅವನೇ ಒಪ್ಪಿಸಿಕೊಳ್ಳುತ್ತಾನೆ' ಎಂದು ಆಗುತ್ತದೆ.

ಈ ಪ್ರಪತ್ತಿಯಲ್ಲಿ ಎರಡು ತೆರ: **ದೃಪ್ತ** ಮತ್ತು **ಆರ್ತ.**

**ದೃಪ್ತನಾದ ಪ್ರಪನ್ನ** ಸಂಸಾರಕ್ಕೆ ಭಯಪಟ್ಟು, ವಿಷಯಭೋಗ ವಿಮುಖನಾಗಿ, ಗುರುವಿನ ಆಶ್ರಯದಿಂದ ಪ್ರಪತ್ತಿಮಾರ್ಗವನ್ನು ಅವಲಂಬಿಸುತ್ತಾನೆ. ಪಾಪದ ಹಾದಿಯನ್ನು ಬಿಟ್ಟು, ವರ್ಣಾಶ್ರಮ ಧರ್ಮಕ್ಕನುಸಾರವಾಗಿ ತನ್ನ ಯಥಾಶಕ್ತಿ ನಡೆದು, ಭಗವಂತನ, ಭಾಗವತರ ಸೇವೆಯಲ್ಲೇ ತಲ್ಲೀನನಾಗುತ್ತಾನೆ. 'ಆತನು ಒಡೆಯ, ತಾನು ಆಳು; ಆತನು ಪ್ರಭು, ತಾನು ಪ್ರಜೆ; ಆತನು ಪತಿ, ತಾನು ಪಶು; ಆತನು ಪರಮಾತ್ಮ, ತಾನು ಆತನಿಗೆ ಶರೀರ; ಆತನು ಭೋಕ್ತೃ, ತಾನು ಭೋಗ; ಆತನು ಸರ್ವಜ್ಞ, ತಾನು ಅಜ್ಞ; ಆತನು ಸರ್ವಸಮರ್ಥ, ತಾನು ಅಸಮರ್ಥ; ಆತ ಪೂರ್ಣ, ತಾನು ಶೂನ್ಯ' ಎಂಬುದಾಗಿ ಸದಾ ಸ್ಮರಿಸುತ್ತಾನೆ. ಹೀಗೆಂದುಕೊಂಡು ತನ್ನ ಯೋಗಕ್ಷೇಮದ ಪಾಲನವನ್ನು ಆತನಿಗೆ ವಹಿಸಿ, ತಾನು ತಾಳ್ಮೆಯಿಂದ ಆತನ ಊಳಿದಲ್ಲಿರುತ್ತಾನೆ.

ಅದೇ **ಆರ್ತನಾದ ಪ್ರಪನ್ನ**, ದೃಪ್ತನಿಗಿರುವ ತಾಳ್ಮೆಯಿಲ್ಲದೆ ಯಿದ್ದರೂ ಅವನಂತೆಯೇ ಶರಣಾಗತಿಯನ್ನು ಹೇಳಿಕೊಳ್ಳುತ್ತ, ಆದಷ್ಟು ಶೀಘ್ರವಾಗಿ ತನ್ನನ್ನು ಭಗವಂತನು ತನ್ನ ಸನ್ನಿಧಿಗೆ ಕರೆದುಕೊಳ್ಳಬೇಕೆಂದು ಬಹು ವಿಧವಾಗಿ ಬೇಡುತ್ತಿರುತ್ತಾನೆ, ಮುಕ್ತಿಗಾಗಿ ಸದಾ ಹಂಬಲಿಸುತ್ತಿರುತ್ತಾನೆ.

**ಆಚಾರ್ಯಾಭಿಮಾನ** ಎಂಬುದು—ದೇವರಿಗೂ ತನಗೂ ನಡುವೆ ಆಚಾರ್ಯನನ್ನು ಮಧ್ಯಸ್ಥಗಾರನನ್ನಾಗಿ ಇರಿಸಿಕೊಂಡು, ಆತನಲ್ಲಿ ಅಭಿಮಾನವಿಟ್ಟು ಭಗವಂತನ ಅನುಗ್ರಹವನ್ನು ಸಂಪಾದಿಸಿಕೊಳ್ಳುವುದು. ಈ ಅನುಗ್ರಹವನ್ನು ಆಚಾರ್ಯನು ಭಗವಂತನಿಂದ ಇವನಿಗೆ ನೇರವಾಗಿ ಕೊಡಿಸಬಹುದು, ಅಥವಾ ತಾನೇ ಪಡೆದು ಕೊಡಬಹುದು.

ಮೇಲಿನ ಪ್ರಪತ್ತಿ ಕೂಡ ಸುಲಭವಲ್ಲ ಎನಿಸಿದವರಿಗೆ ಪ್ರತ್ಯಕ್ಷನಾದ ಆಚಾರ್ಯನಲ್ಲಿ ಆಚರಿಸಬರುವ ಈ ಆಚಾರ್ಯಾಭಿಮಾನದ ಮಾರ್ಗ ಸುಲಭತರವಾದದ್ದು.

ಇದು ಹೇಗೆಂದರೆ – ಕೈಲಾಗದ ಮಕ್ಕಳನ್ನು ಒಂದು ಕೈಯಿಂದ ಹಿಡಿದು ಮೇಲೆತ್ತಿ, ಇನ್ನೊಂದು ಕೈಯಿಂದ ಅವರನ್ನು ಆಕಡೆ ಭಗವಂತನ

ಕರುಣೆಗೆ ಒಪ್ಪಿಸುವ ಹಾಗೆ. ಮತ್ತೂ ಹೇಗೆಂದರೆ—ತಾಯಿಯಾದವಳು ತನ್ನ ಮಗುವಿನ ರೋಗವನ್ನು ಪರಿಹರಿಸುವುದಕ್ಕಾಗಿ ತಾನು ತನ್ನ ಸ್ವಂತ ಸುಖಗಳನ್ನು ಕಡೆಗಣಿಸಿ, ಔಷಧ ಪಥ್ಯಗಳನ್ನು ತಾನು ಸೇವಿಸಿ, ಅದರ ಫಲವನ್ನು ಮಗುವಿಗೆ ಅನುಗ್ರಹಿಸುವ ಹಾಗೆ.

ಈ ಸರ್ವಸುಲಭವಾದ ಪಂಚವೋಪಾಯವನ್ನೂ ಭಗವಂತನೇ ತನ್ನ ಅವ್ಯಾಜವಾದ ಕರುಣೆಯಿಂದ ಜೀವರುಗಳಿಗೆ ಪ್ರಸಾದಿಸಿದನು.

## ೫. ವಿರೋಧಿಸ್ವರೂಪ ತತ್ತ್ವಜ್ಞಾನ*

ಈ ತತ್ತ್ವ ಕೂಡ ಐದು ವಿಧ: **ಸ್ವರೂಪ ವಿರೋಧಿ, ಪರತ್ವ ವಿರೋಧಿ, ಪುರುಷಾರ್ಥ ವಿರೋಧಿ, ಉಪಾಯ ವಿರೋಧಿ** ಮತ್ತು **ಪ್ರಾಪ್ತಿ ವಿರೋಧಿ.**

**ಸ್ವರೂಪವಿರೋಧಿ** ಎಂಬುದು ಜೀವತತ್ತ್ವಕ್ಕೆ ವಿರುದ್ಧವಾದದ್ದು. ಈ ಭ್ರಮೆ ಹೋದರೆ, ಜೀವ ಸ್ವತಂತ್ರನಲ್ಲ, ಅದಕ್ಕೂ ಪರಮಾತ್ಮನಿಗೂ ಸ್ವಸ್ವಾಮಿಸಂಬಂಧವುಂಟು ಎಂಬ ಜ್ಞಾನ ಉಂಟಾಗುತ್ತದೆ.

**ಪರತ್ವವಿರೋಧಿ** ಎಂಬುದು ಈಶ್ವರತತ್ತ್ವಕ್ಕೆ ವಿರುದ್ಧವಾದದ್ದು. ದೇವತಾಂತರಗಳಿಗೆ ಪರತತ್ತ್ವದ ಸ್ವರೂಪರೂಪವಿಭವಗಳುಂಟೆಂದಾಗಲಿ ರಾಮ ಕೃಷ್ಣಾದ್ಯವತಾರಗಳನ್ನು ಕೇವಲ ಮನುಷ್ಯರೆಂದಾಗಲಿ, ದೇವರ ವಿಗ್ರಹಗಳನ್ನು ಅಸಮರ್ಥವಾದ ಅಚೇತನಗಳೆಂದಾಗಲಿ ಭಾವಿಸುವುದು.

**ಪುರುಷಾರ್ಥವಿರೋಧಿ** ಎಂಬುದು ಮುಕ್ತಿಗೆ ವಿರುದ್ಧವಾದದ್ದು. ಮುಕ್ತಿಗಿಂತ ಇತರವಾದ ಅರ್ಥ ಕಾಮಗಳನ್ನು ಮಾತ್ರ ಬಯಸುವುದು.

**ಉಪಾಯವಿರೋಧಿ** ಎಂಬುದು ಮೇಲೆ ಹೇಳಿರುವ ಐದು ಉಪಾಯಗಳಲ್ಲಿ ಕೊನೆಯ ಎರಡಕ್ಕಿಂತ ಮೊದಲಿನ ಮೂರೇ ಶ್ರೇಷ್ಠವೆಂದು, ಅಥವಾ ಐದು ಉಪಾಯಗಳೂ ಒಂದೇ ಸಮನಾದುವೆಂದು ತಪ್ಪು ಭಾವಿಸುವಿಕೆ; ಅಲ್ಲದೆ, ಇಷ್ಟು ಸುಲಭರೀತಿಯಾದ ಪ್ರಪತ್ತಿಯಿಂದಲೂ ಆಚಾರ್ಯಾಭಿಮಾನದಿಂದಲೂ ಮುಕ್ತಿ ಸಾಧ್ಯವೇ ಎಂದು ಶಂಕೆಪಡುವಿಕೆ; ಅಲ್ಲದೆ, ಪರಮಪುರುಷಾರ್ಥವಾದ ಮುಕ್ತಿಯ ಘನತೆಗೆ ಈ ಕಡೆಯ

*ಬಿನ್ನಪ ೨, ೬, ೭, ೮, ೯, ೧೧, ೧೯, ೨೧, ೨೨, ೨೫, ೨೯.

ಎರಡು ಉಪಾಯ ತುಂಬಾ ಲಘುವಾಯಿತು, ಇದು ಗುರಿಯನ್ನು ಮುಟ್ಟಿಸಲು ಅಸಮರ್ಥ, ಮಾರ್ಗದಲ್ಲಿನ ಅಡ್ಡಿಗಳು ಅನೇಕ ಎಂದು ವೃಥಾ ಭೀತಿಪಡುವಿಕೆ.

**ಪ್ರಾಪ್ತಿವಿರೋಧಿ** ಎಂಬುದು ಪ್ರಾಪ್ತಿಯಾದ ಮೋಕ್ಷವನ್ನು ಪಡೆಯದಂತೆ ತಡೆಯುವ ಅನುತಾಪಶೂನ್ಯವಾದ ಭಗವದಪಚಾರ, ಭಾಗವತಾಪಚಾರ ಮತ್ತು ಅಸಹ್ಯಾಪಚಾರ. ದೇಹಾಭಿಮಾನವು ಸ್ವರೂಪವಿರೋಧಿ, ಅನ್ನದೋಷವು ಜ್ಞಾನ ವಿರೋಧಿ, ಸಹವಾಸದೋಷವು ಭೋಗವಿರೋಧಿ.

## ಕಡೆಯದಾಗಿ

ಈ ತೆರನಾದ ಅರ್ಥಪಂಚಕ ತತ್ತ್ವಜ್ಞಾನದಿಂದ ಸನ್ನದ್ಧನಾಗಿ ಪರಮಾತ್ಮನ ಪರಮಪದಕ್ಕೆ ಹೊರಡಲು ಪ್ರಪನ್ನನಾಗಿರುವ ಯಾತ್ರಿಕನು ಅದಕ್ಕೆ ತಕ್ಕ ನಡತೆಯಿಂದ ನಡೆದು—

ಎಂದರೆ, ವರ್ಣಾಶ್ರಮ ಧರ್ಮಕ್ಕೆ ಅನುಸಾರವಾಗಿ ನಡೆದು ತನ್ನ ಹೊಟ್ಟೆಗೂ ಬಟ್ಟೆಗೂ ಸಂಪಾದಿಸಿಕೊಂಡು, ಅದನ್ನು ಭಗವಂತನಿಗೆ ಅರ್ಪಿಸಿ, ಯಥಾಶಕ್ತಿಯಿಂದ ಭಾಗವತರಿಗೆ ಅರ್ಪಿಸಿ, ತನಗೆ ಎಷ್ಟು ಅಗತ್ಯವೋ ಅಷ್ಟನ್ನೇ ಮಿತವಾಗಿ ಅನುಭವಿಸಿ; ತನಗೆ ಜ್ಞಾನದಾನ ಮಾಡುವ ಗುರುವಿಗೆ ಕೃತಜ್ಞನಾಗಿ; ದೇವರ ಮುಂದೆ ತಾನು ವಿನೀತನೆಂದು, ಗುರುವಿನ ಮುಂದೆ ತಾನು ಅಜ್ಞನೆಂದು, ಭಾಗವತರ ಮುಂದೆ ತಾನು ವಿಧೇಯನೆಂದು ನಡೆದು; ಸಂಸಾರಿಗರಿಂದ ದೂರಾಗಿ, ತಾನು ಆರಿಸಿಕೊಂಡ ಮುಕ್ತಿಪಥದಲ್ಲಿ ನಿಷ್ಠನಾಗಿ; ತಾನು ತನ್ನನ್ನು ರಕ್ಷಿಸಿಕೊಳ್ಳಲು ಅಸಮರ್ಥನೆಂಬುದನ್ನರಿತು, ಆ ಭಾರವನ್ನು ಭಗವಂತನಿಗೆ ಒಪ್ಪಿಸಿ, ಬಂದುದನ್ನು ನಿಶ್ಚಿಂತೆಯಿಂದ ಅನುಭವಿಸುತ್ತ ಆಚಾರ್ಯನ ತಿರುವಡಿಗಳನ್ನು ಅನನ್ಯಗತಿಕನಾಗಿ ನಂಬಿ ನಡೆದು—

—ಕಡೆಗೆ ನಾರಾಯಣನಿಗೆ ಪ್ರಿಯನಾಗುವನು.

ಇದನ್ನು ಕುರಿತೇ ಶ್ರೀ ಕೃಷ್ಣನು ಗೀತೆಯಲ್ಲಿ ಹೇಳಿದ್ದು (xi-55):

ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ.

## 'ಚಿಕದೇವರಾಜ ಬಿನ್ನಪ'ದಲ್ಲಿ ಪರತತ್ತ್ವದ ಸಂಕೀರ್ತನೆ

ಈಶ್ವರನೆಂಬ ಈ ಪರತತ್ತ್ವಕ್ಕೆ ಈ 'ಬಿನ್ನಪ'ದಲ್ಲಿ ಮೂವತ್ತು ಸಂಬೋಧನೆಗಳನ್ನು ಸಕಾರಣವಾಗಿ ಉಪಯೋಗಿಸಿರುತ್ತಾರೆ. ಅವು ಯಾವುವೆಂದರೆ:

೧. ಶ್ರೀಮನ್ನಾರಾಯಣ
೨. ಪರಬ್ರಹ್ಮಸ್ವರೂಪ
೩. ಅಪ್ರಮೇಯ
೪. ಸಕಲವಿದ್ಯಾಪ್ರವರ್ತಕ
೫. ಸಕಲವೇದವೇದ್ಯ
೬. ಅದ್ಭುತಚರಿತ
೭. ಸಮಸ್ತಚಿದಚಿದ್ವಸ್ತುಶರೀರಕ
೮. ಅಘಟಿತಘಟನಾಸಮರ್ಥ
೯. ಸಕಲಲೋಕನಿಯಾಮಕ
೧೦. ಸಕಲಜಗದೇಕಕಾರಣ
೧೧. ಪರಮಾತ್ಮ
೧೨. ಪರತತ್ತ್ವಸ್ವರೂಪ
೧೩. ಅನೇಕಕೋಟಿಬ್ರಹ್ಮಾಂಡ-ನಾಯಕ
೧೪. ಸಕಲಭುವನಾಧಾರ
೧೫. ಅಖಂಡಭೂಮಂಡಲಾಧೀಶ್ವರ
೧೬. ನಿಖಿಲಭೋಗಪ್ರದ
೧೭. ನರಕಾಂತಕ
೧೮. ಪರಮಪಾವನ
೧೯. ಮೋಕ್ಷದಾನೈಕದೀಕ್ಷಿತ
೨೦. ಸತ್ವಪ್ರವರ್ತಕ
೨೧. ಸರ್ವತಂತ್ರಸ್ವತಂತ್ರ
೨೨. ಅನನ್ಯಜನಸುಲಭ
೨೩. ಸಕಲಕರ್ಮಫಲಪ್ರದ
೨೪. ಸರ್ವಾಭೀಷ್ಟಪ್ರದ
೨೫. ಪ್ರಪನ್ನಜನಪರಿಪಾಲಕ
೨೬. ಸರ್ವರಕ್ಷಕ
೨೭. ಅಖಿಲಲೋಕಶರಣ್ಯ
೨೮. ಸಕಲಜೀವದಯಾಪರ
೨೯. ದಿವ್ಯಮಂಗಳವಿಗ್ರಹ
೩೦. ಸಕಲಕಲ್ಯಾಣಗುಣಾತ್ಮಕ

ಈ ಮೂವತ್ತು ಹೆಸರುಗಳನ್ನು ಬಿನ್ನಹಗಳ ಆರಂಭದಲ್ಲಿ ಸಂಬೋಧನೆಗಾಗಿ ಬಳಸಿದ್ದು ಮಾತ್ರವಲ್ಲದೆ ಇನ್ನೂ ಕೆಲವು ಹೆಸರುಗಳನ್ನು ಬಿನ್ನಹಗಳ ಒಡಲಲ್ಲಿಯೂ ಸಕಾರಣವಾಗಿ ಬಳಸಿದ್ದಾರೆ. ಅವು ಯಾವುವೆಂದರೆ: ಸಕಲಜನರಕ್ಷಣದೀಕ್ಷಿತ (ಬಿನ್ನಪ ೧.) ಸರ್ವಾಶ್ಚರ್ಯಮಯ (ಬಿನ್ನಪ ೬.) ಸರ್ವಸಮ, ಸ್ವತಂತ್ರ, ದಯಾಳು (ಬಿನ್ನಪ ೯, ೨೪).

ಸುಶೀಲ, ಕಡುಸ್ಥೈರಣೆಯುಳ್ಳವ, ಕಟ್ಟೆರಕದವ, ಭಕ್ತಪ್ರಯೋಜನೈಕ ಪರ, ಸುಲಭ, ಕಡುಚಾಗಿ, ಪರಮರಕ್ಷಕ (ಬಿನ್ನಪ ೩೦.)

ಇಷ್ಟೇ ಅಲ್ಲದೆ — ಆತನು ಶ್ರಿಯಃಪತಿ, ಅಖಿಲದೋಷಪ್ರತ್ಯನೀಕನು, ಸಕಲ ಕಲ್ಯಾಣಗುಣಾಕಾರನು, ಅವಾಪ್ತಸಮಸ್ತಕಾಮನು, ಬದ್ಧಾತ್ಮವರ್ಗದ ಮೇಲೆ ಅಕಾರಣ ಕರುಣಾಬ್ಧಿ ಕಲ್ಲೋಲಗಳನ್ನು ಕವಿಸುವವನು (ಬಿನ್ನಪ ೧.); ಭಕ್ತಜನಸುಲಭನು (ಬಿನ್ನಪ ೩.); ನೆವವಿಲ್ಲದ ದಯೆಯುಳ್ಳವನು (ಬಿನ್ನಪ ೧೧.); ಎಂದು ಮುಂತಾಗಿ ವರ್ಣನೆಯುಂಟು.

ಈ ಗುಣಗಳಲ್ಲೆಲ್ಲ ಬಹು ಮುಖ್ಯವಾಗಿ ಮೇಲಿಂದ ಮೇಲೆ ಕೊಂಡಾಡಲ್ಪಟ್ಟಿರುವುದು — ಈಶ್ವರನ ದಯಾಕಟಾಕ್ಷ. ಈ ದಯೆಯಿಂದಲೇ—ರೂಪಳಿದಿದ್ದ ಬದ್ಧಾತ್ಮವರ್ಗವು ಕರಣಕಳೇಬರಗಳನ್ನು ಪಡೆಯಿತು; ಆಯಾ ದೇಹಕ್ಕೆ ಉಚಿತವಾದ ಜ್ಞಾನ ಶಕ್ತಿಗಳನ್ನು ಪಡೆಯಿತು; ಹೀಗೆ ಪಡೆದ ದೇಹದಿಂದ ಕರ್ಮ ಮಾಡುವುದಕ್ಕೆ ಬೇಕಾದ ಭೂಮಿಯನ್ನು ಪಡೆಯಿತು; ಸರಿಯಾದ ಕರ್ಮ ಯಾವುದೆಂದು ತೋರಿಸುವುದಕ್ಕೆ ಬೇಕಾದ ವೇದ ಸ್ಮೃತಿ ಶಾಸ್ತ್ರ ಇತಿಹಾಸ ಪುರಾಣ ತಂತ್ರಗಳನ್ನು ಪಡೆಯಿತು; ಅರ್ಥಪಂಚಕಜ್ಞಾನವನ್ನು ಪಡೆಯಿತು. ಅದರಿಂದ ಬದ್ಧಾತ್ಮವರ್ಗ ಮುಕ್ತವಾಯಿತು.

ಈ ಪರತತ್ತ್ವಕ್ಕೆ ಉಳಿದ ಇಪ್ಪತ್ತೈದು ತತ್ತ್ವಗಳೂ ಅಧೀನ. ಅವು ಯಾವುವೆಂದರೆ: ಒಂದು ಜೀವಾತ್ಮ; ಒಂದು ಪ್ರಕೃತಿ, ಒಂದು ಮಹತ್, ಒಂದು ಅಹಂಕಾರ, ಹನ್ನೊಂದು ಇಂದ್ರಿಯಗಳು, ಐದು ತನ್ಮಾತ್ರಗಳು ಮತ್ತು ಐದು ಭೂತಗಳು.

ಅನುಬಂಧ ನಾಲ್ಕು

## ಶರಣಾಗತಿಯ ವಚನಗಳು

[ಈ ವಚನಗಳು ಪ್ರತಿ ಬಿನ್ನಪದ ಅಂತ್ಯದಲ್ಲೂ ಇವೆ. ಇಲ್ಲಿ ಅವುಗಳನ್ನು ಮೂಲದ ಮಾತಿನಲ್ಲೇ ಒಂದು ಕಡೆ ಕೂಡಿಸಿಕೊಟ್ಟಿದೆ.]

೧. ಈ ಯದುವಂಶದೊಳ್ ಪುಟ್ಟಿದವರ್ಗೆ ಕುಲದೇವತೆಯೆನಿಸಿ ದಯಾವಿಶೇಷದಿಂ ಪೊರೆವನಪ್ಪುದಱಿಂದೆನ್ನೊಳಂ ಅಕಾರಣ ಕರುಣಾಬ್ಧಿ ಕಲ್ಲೋಲಂಗಳಂ ಕವಿಸಿ ಮನ್ನಿಪುದು ಮನ್ನಿಪುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ !

೨. ನೀನೇ ಜಗದಾದಿಕಾರಣಮಾದ ಪರಬ್ರಹ್ಮಮೆಂಬುದಂ ಸಾತ್ತ್ವಿಕರಿಂ ತಿಳಿದೆನ್ನ ತಾಪತ್ರಯಮಂ ಕಳೆಯಲೆಂದು ನಿನ್ನಡಿನೆಲಲಂ ಸೇರಿದೆಂ; ಎನ್ನಂ ತಣ್ಪುಗೊಳಿಪುದು ತಣ್ಪುಗೊಳಿಪುದು, ಅನನ್ಯಜನ ಸುಲಭ, ಶ್ರೀ ಯದುಶೈಲವಲ್ಲಭಾ !

೩. ಪ್ರಮಾಣಂಗಳಿಂದಂ ನಿನ್ನ ಸ್ವರೂಪ ರೂಪ ಗುಣ ವಿಭವಾದಿ ಗಳೊಳಿನಿಸಂ ತಿಳಿವುದಲ್ಲದೆ ಇಂತೆಂದು ಪರಿಚ್ಛೇದಂಗೆಯ್ವುದರಿದಾದು ದಱಿಂ ನೀನಪ್ರಮೇಯನೆನಿಸುವೈ. ಆದೊಡಂ ನಿನ್ನ ಭಕ್ತಜನಸುಲಭ ತೆಯುಂ ಮೆಱೆದೆನ್ನೆರ್ದೆವನೆಯೊಳ್ ನೆಲೆಗೊಂಬುದು ನೆಲೆಗೊಂಬುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ !

೪. ಪದಿನೆಂಟುಂ ವಿದ್ಯೆಗಳೊಳಂ ಪ್ರಧಾನಮಾದ ವೇದಾಂತ ದೊಳ್ ಪ್ರಕಾಶಮಾದ ನಿನ್ನ ಸ್ವರೂಪಮಂ ತಿಳಿಪಿ ಎನ್ನ ಮನದ ಜಡರಂ ಕಳೆದು ನಿನ್ನಡಿಯೊಳ್ ಜ್ಞಾನಭಕ್ತಿಗಳಂ ಬಲಿಯಿಪುದು ಬಲಿಯಿಪುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ !

೫. ಮಾನಸರ್ ಸ್ವಪ್ರಯತ್ನದಿಂ ನಿನ್ನ ನೆಲೆಯಂ ತಿಳಿದು ಭಜಿಸಿ ಕಡೆಗಾಣ್ಬರೆಂಬುದು ಮನೋರಥಮಾತ್ರಮೆ. ಅದಱಿಂ ನೀನೆ ದಯೆ ಗೆಯ್ದು ನಿನ್ನ ಸ್ವರೂಪಮಂ ತಿಳಿಪಿ ಎನ್ನಂ ನಿನ್ನೊಱಗದವನೆನಿಪುದು ಎನಿಪುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ !

೬. ನಿನ್ನ ನೆಲೆಯಂ ನಿರೂಪಿಸಲ್ಕಾನೆನಿತಱವಂ. ಎನ್ನಂ ನಿನ್ನ ನಿರ್ವ್ಯಾಜದಯಾಮೃತಾಬ್ಧಿತರಂಗದೊಳ್ ತೇಲಿಸಿ ಲಾಲಿಪುದು ಲಾಲಿಪುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೭. ಈ ಚೇತನಾಚೇತನಂಗಳೆಲ್ಲಮುಂ ಬೇಱಾಗಿರ್ದೊಡಂ ನಿನ್ನ ಶರೀರಮಪ್ಪುದಱಿಂ ನೀನೊರ್ವನೆ ಎಂಬುದು ಯುಕ್ತಂ. ಈ ತತ್ತ್ವಜ್ಞಾನಮೆನ್ನ ಮನದೊಳ್ ನೆಲೆಗೊಂಬಂತೆ ನೀಂ ಕರುಣಿಪುದು ಕರುಣಿಪುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೮. ನಿನ್ನ ಮಹಿಮಾರ್ಣವಮಂ ವರ್ಣಿಪೆನೆಂದು ಪೂಣ್ದೆನ್ನ ಸಾಹಸಮಂ ಸೈರಿಸಿ, ನಿನ್ನವನೆಂದು ನಲಿಯಿಪುದು ನಲಿಯಿಪುದು ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೯. ನಿನ್ನಂ ನೆಱೆನಂಬಿದೆನ್ ಎನ್ನ ತಪ್ಪನೊಪ್ಪುಗೆಯ್ದು ಕರುಣಿಪುದು ಕರುಣಿಪುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೧೦. ನಿನ್ನವರೆನಿಪ ಪಿರಿಯರ್ ಪಲರ್ಮೆಯಿಂ ಕಲಿಸೆ ಒನ್ದೊಂದು ನುಡಿಯಂ ಕಲ್ತೋದುವ ಗಿಳಿವಱಿಯನ್ತೆನ್ನ ನುಡಿಗೆ ಚಿತ್ತದೊಳ್ ಸಂತಸಂಬಡುವುದು ಸಂತಸಂಬಡುವುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೧೧. ನೀನೊಡೆಯನುಮಾನೊಡಮೆಯುಮೆನಿಪ ಸ್ವ-ಸ್ವಾಮಿಸಮ್ಬನ್ಧಮಂ ಇನ್ನೆವರೆಮಱಿಯದೆ ಪುರುಳಱದಿರ್ಪೆನಗೆ ನೆವಮಿಲ್ಲದ ದಯೆಯಿಂದೀಗಳಱಿಪಿ ಸ್ವರೂಪಮನುಣ್ಟುಮಾಡಿದ ಮೇಲಿನ್ನುಂ ಶ್ರೀಯಃಪರಂಪರೆಗಳಂ ಪೆಂಪುಗೆಯ್ವುದು ಪೆಂಪುಗೆಯ್ವುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೧೨. ನೀನೇ ಪರತತ್ತ್ವಮೆಂದು ಪಿರಿಯರಿಂ ಕೇಳ್ದು ನಿನ್ನನೆ ನೆಱೆ ನಂಬಿದೆನ್ನಂ ದಯಾಮೃತದೊಳ್ ನನೆದು ತಣ್ಪುವೆತ್ತ ನಿನ್ನ ಕಡೆಗಣ್ ಬೆಳಗನೆನ್ನೊಳ್ ಸುಱಿಸಿ ಎನ್ನ ರಜಸ್ತಮೋಗುಣಂಗಳೆಂಬ ಕಳೆಯಂ ಕಳೆದು ಸತ್ತ್ವಗುಣಮಂ ಪೆರ್ಚಿಪುದು ಪೆರ್ಚಿಪುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೧೩. ಜಗದ್‌ವ್ಯಾಪಾರವ್ಯಾಸಂಗದೊಳೆನ್ನಂ ಮಱೆಯದೆ ನಿನ್ನ ದಯಾರ್ದ್ರಚಿತ್ತದಿಂ ನೆನೆವುದು ನೆನೆವುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೧೪. ಎನ್ನ ಸ್ವರೂಪರೂಪಸ್ಥಿತಿಗಳ್ ನಿನ್ನಧೀನವಾಗಿರ್ಪುದೆಂದು ಪಿರಿಯರಿಂ ಕೇಳ್ದು ಎನ್ನ ಹಿತಾಹಿತದೊಳಾಂ ಕೈದೆಗೆನಿರ್ಪೆನೆನ್ನಂ ಸಲಪುವ ಸೈಪು ನಿನ್ನದು ನಿನ್ನದನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೧೫. ನಿನ್ನೈಶ್ವರ್ಯಮಂ ಕಡೆಗಾಣ್ಬೊಡೆ ಅಂಬುಜಸಂಭವಾದಿಗಳ್ಗಮರಿದಾದೊಡಂ ಮುಱುಕದಿಂದಾನೆನ್ನ ಬಿನ್ನಣಮಿರ್ದನಿತು ಬಿನ್ನವಿಪೆನಿದಂ ಮನ್ನಿಪುದು ಮನ್ನಿಪುದನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೧೬. ಭೋಗಭೂಮಿಗಳೊಳನುಭವಿಸುವ ಭೋಗಮನಿತ್ಯಮಾದುದಱಿಂದೆ ಆನಿವಂ ಬಯಸಿದವನಲ್ತು; ನಿತ್ಯಭೋಗಮೆನಿಪ ನಿನ್ನೂೞಿಗಮನೆ ಬಯಸಿದೆಂ. ನಿಖಿಲಭೋಗಪ್ರದನಪ್ಪ ನೀನೆನಗಿದಂ ನೆಲೆಗೊಳಿಪುದು ನೆಲೆಗೊಳಿಪುದನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೧೭. ನಿನ್ನ ದಿವ್ಯಸಂಕೀರ್ತನದಿಂದಮೆ ಸಕಲ ನರಕಭಯಮುಂ ಪರಿಹಾರಮಪ್ಪುದಱಿಂ ನಿನ್ನನೆ ನೆಱೆನಂಬಿದೆನೆನ್ನ ಭಯಮಂ ಪರಿಹರಿಸಿ ನಿನ್ನಡಿಯೂೞಿಗಮನಿತ್ತು ಮನ್ನಿಪುದು ಮನ್ನಿಪುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೧೮. ದಯಾಳುವಾದ ನಿನ್ನ ಕಟಾಕ್ಷದಿಂ ಮನದೊಳ್ ವಿವೇಕಂ ಪುಟ್ಟಿ ಪಿಂತಣ ಪಾಪಕ್ಕೆ ಪಶ್ಚಾತ್ತಾಪಮುಂಟಾಗಿ ಯಥಾಶಕ್ತಿ ಪ್ರಾಯಶ್ಚಿತ್ತಮನಾಚರಿಸಿ, ನೀನಾಳ್ದನುಂ ತಾನಾಳುಮೆಂಬೆಣಿಕೆಗೂಡಿ ನಿನ್ನನೇ ನೆನೆಯುತಿರ್ಪುದೆಂಬ ಕೃಷ್ಣಾನುಸ್ಮರಣಮೊಂದಱಿಂದಮೆ ಸಕಲ ಪಾಪಂಗಳುಂ ಸವಾಸನಮಾಗಿ ಪೋಪುದೆಂಬ ಶಾಸ್ತ್ರಾರ್ಥತತ್ತ್ವಮಂ ತಿಳಿಯೆ, ನೀನೇ ಪರಮ ಪಾವನನೆನಿಸುವೈ. ಆದಱಿಂ ನೀನೆನ್ನ ಪಾಪಂಗಳಂ ಪಿರಿದೆನಿಸದೆ ನಿನ್ನ ಪಾವನತ್ವಮಂ ಮೆಱೆದೆನ್ನಂ ಪೊರೆವುದು ಪೊರೆವುದು ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೧೯. ನಿನ್ನ ಪ್ರೀತಿಯೊಂದೇ ಮೋಕ್ಷಸಾಧನಮಪ್ಪುದಱಿಂ ನಿನ್ನ ದಯಾಮೃತದೊಳ್ ಪುಟ್ಟಿ ಬಳೆದ ಪರಾಂಕುಶ ಪರಕಾಲ ಯತಿ

ವರಾದಿಗಳ್ ಪಿಡಿದು ಲಕ್ಷ್ಮಣಾಚಾರ್ಯಪರ್ಯನ್ತಮಾದ ಪಿರಿಯುರಂ ಕುಱಿತೆನ್ನೊಳ್ ದಯೆಗೆಯ್ವುದು ದಯೆಗೆಯ್ವುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೨೦. ನಿನ್ನ ಜಾಯಮಾನ ಕಟಾಕ್ಷಮಂ ಪಡೆದು ಸಾತ್ವಿಕರಾಗಿ ಸಾತ್ವಿಕ ಪುರಾಣಾನುಗುಣಮಾಗಿ ವೇದಾಂತಾರ್ಥನಿಶ್ಚಯಂಗೆಯ್ವ ಮಹಾತ್ಮರಂ ನೆಱೆನಂಬುವ ಸತ್ತ್ವಗುಣಮನೆನಗೆ ಪಾಲಿಪುದು, ಪಾಲಿಪುದನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೨೧. ತಂತ್ರಂಗಳನಿತುಂ ನಿನ್ನಂ ಪ್ರತಿಪಾದಿಸುತ್ತೆ ನಿನಗೆ ಪರತಂತ್ರಮಾಗಿರ್ಪುದಱಿಂ ನೀಂ ಸರ್ವತಂತ್ರ ಸ್ವತಂತ್ರನೆನಿಸುವೈ. ಇಂತಿರ್ಪ ನೀನೆ ಎನಗೆ ನಿನ್ನ ನೆಲೆಯುಂ ತಿಳುಪುವುದು ತಿಳುಪುವುದನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೨೨. ವಿಷಯವಿರಕ್ತಿಯುನಿತ್ತು ನಿನ್ನ ಭಕ್ತಿಯನೆನಗೀವುದು ಎನಗೀವುದನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೨೩. ಕಾಮ್ಯಕರ್ಮಮುಂ ದುಷ್ಕರ್ಮಮುಂ ನಿನ್ನ ಮನಕ್ಕೆ ಬಾರದಿರ್ದುದಱಿಂ ನಿನ್ನಡಿಯುಂ ಸೇರಲೀಸದೆ ಸಂಸಾರಮೆಂಬ ಸೆರೆಮನೆಯೊಳ್ ಕೆಡವಿ ಕಾಲ್ತೊಡಕಾಗಿರ್ಪುದಱಿಂ ಪೊನ್ನಕಾಬ್ಬೊನ್ನ ಸಂಕಲೆಗಳಂತಿರ್ಪುವು. ಅದಱಿಂದೀಯೆರಡುಂತೆಱದ ಬನ್ಧಕ್ಕೆ ಸಿಲ್ಕದೆ ನಿನ್ನನೆ ನೆಱೆನಂಬಿ ನೀನೊಲ್ದು ನಿರವಿಸಿದೂಳಿಗಮಂ ಸನ್ತಸದೊಳೆಸಗಿ ನಿನ್ನ ಮನ್ನಣೆಯುಂ ಪಡೆವ ಸಯ್ಪನೆನಗೆ ಪಾಲಿಪುದು ಪಾಲಿಪುದು. ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೨೪. ಸರ್ವಸಮನೆನಿಪ ನೀಂ ನಿನ್ನ ದಯಾಮೃತಾಂಬುಧಿತರಂಗದಿಂದೆನ್ನ ಅಱಿಗೆಯ್ತಂಗಳೆಂಬ ಕರುಮ್ಮಮಂ ಕಳೆದು ನಿನ್ನಾಳ್ತನಮೆಂಬ ಪೊಗರಂ ಪೊಣ್ಮಿಪುದು ಪೊಣ್ಮಿಪುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೨೫. ಇತರ ಭ್ರಾಂತಿಗಳನುೞಿದು ನಿನ್ನಿಂದಮೇ ಬರ್ದುಂಕುವೆನೆಂದು ನಿನ್ನಂ ನೆಱೆನಂಬಿದವರ್ ಎನ್ತಪ್ಪರಾದೊಡಂ ಅವರ ಯೋಗಕ್ಷೇಮಂಗಳಂ ಪೊತ್ತೆಸಗುವೆನೆಂದು ನೀಂ ಮುನ್ನಮರ್ಜುನಂಗೆ ಪೇೞ್ದುದಂ

ಮಱೆಯದೆ, ಈಗಳೆನ್ನಂ ಪಾಲಿಪುದು ಪಾಲಿಪುದು, ಅನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ !

೨೬. ಸರ್ವರಕ್ಷಕನೆನಿಸಿ ನೆಗೞ್ದ ನಿನ್ನಂ ಮಱೆವೊಕ್ಕು ನಿನ್ನ ಮೆಲ್ಲಡಿಗಳೇ ಉಪಾಯೋಪೇಯಗಳೆಂದು ನೆಱೆನಂಬಿ ಪೆಱತೆಲ್ಲಮಂ ತೊಱೆದು ಅನನ್ಯಗತಿಯೆನಿಸಿದೆನೆನ್ನಂ ರಕ್ಷಿಪುದು ರಕ್ಷಿಪುದು, ಅನನ್ಯಜನ ಸುಲಭ ಶ್ರೀ ಯದುಶೈಲವಲ್ಲಭಾ!

೨೭. ಜ್ಞಾನಭಕ್ತಿ ವೈರಾಗ್ಯಾದಿ ಸದ್ಗುಣಸಂಪನ್ನರ್ಗಂ ಅಕಿಂಚ ನರುಮನನ್ಯಗತಿಗಳುಮಪ್ಪ ಎನ್ನವಂದಿಗರ್ಗಂ ಒಂದೇ ಕಾಪಾಗಿ ಸರ್ವ ಶರಣ್ಯನೆನಿಸಿದ ನಿನ್ನಂ ಮಱೆವೊಕ್ಕೆಂ. ಎನ್ನಂ ಕೆಯ್ವಿಡಿದು ಕಾಪಿಡು ವುದು ಕಾಪಿಡುವುದನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ !

೨೮. ನೀಂ ಸಕಲಾತ್ಮವರ್ಗದೊಳಂ ದಯೆಗೆಯ್ಯುತ್ತಿರೆ ಆನಿಂದು ನಿನ್ನಂ ಪ್ರಾರ್ಥಿಸುವ ಚಾಪಲಮಂ ಸೈರಿಸಿ ಸಲಪುವುದು ಸಲಪುವುದನನ್ಯ ಜನಸುಲಭ ಶ್ರೀ ಯದುಶೈಲವಲ್ಲಭಾ !

೨೯. ನಿನ್ನ ದಿವ್ಯಮಂಗಳವಿಗ್ರಹ ಸಾಕ್ಷಾತ್ಕಾರ ರಸಸರ್ವಸ್ವ ದಾನದಿಂದೆನ್ನ ಮನೋರಥಮಂ ಸಲಿಪುದು ಸಲಿಪುದನನ್ಯಜನಸುಲಭ ಶ್ರೀ ಯದುಶೈಲವಲ್ಲಭಾ!

೩೦. ನಿನ್ನ ಕಲ್ಯಾಣಗುಣಂಗಳಂ ಕೇಳ್ದು ತಿಳಿದು ಸನ್ತಸಂ ಬಡೆದು, ಈವೊಡೆಯಂಗೆ ಊೞಿಗಮನೆಸಗುವುದಱಿಂದೆಯುಂ ಪೆಱ ತೊಂದಾನಂದಮಿಲ್ಲೆಂದು ಸ್ವರುಚಿಯಿಂದೀಗಳಾಂ ಪೊಸವೂೞಿಗದವನು ಮೆನಿಸಿ ಸೇರಿದೆಂ. ಎನ್ನನಾಳ್ಗೊಂಬುದು ಆಳ್ಗೊಂಬುದು, ಅನನ್ಯಜನ ಸುಲಭ ಶ್ರೀ ಯದುಶೈಲವಲ್ಲಭಾ!

ಅನುಬಂಧ ಐದು

## ಪ್ರಪತ್ತಿಯ ಒಂದು ಗೀತ

'ಶ್ರೀ ಚಿಕದೇವರಾಜ ವಿರಚಿತಮಪ್ಪ ದಿವ್ಯಪ್ರಬಂಧಂಗಳೊಳ್' ಶ್ರೀ ಗೀತ **ಗೋಪಾಲಂ** ಎಂಬುದೂ ಒಂದು. ಈ ಗ್ರಂಥದ ರಚನೆಯನ್ನು ಕುರಿತು ಅದೇ ಕೃತಿಯ ಪೀಠಿಕೆಯಲ್ಲಿ ಈ ಮಾತುಗಳಿವೆ:

ಅನವಧಿದಯದಿಂದೀ ಪರಿ
ಜನಮನಿತುಮನರಸುಗೆಯ್ತುದಿಂ ಪೊರೆದಿಹದೊಳ್
ನೆನೆದಂ ಪರಸುಖಮನವ
ರ್ಗನುಗೊಳಿಪಿರವಾವುದೆಂದು ಚಿಕದೇವೇಂದ್ರಂ

ಪರಿಕಿಸೆ ಪರಿಕಿಸೆ ಕಿವಿಯೊಳ್
ಪರಾಶರವ್ಯಾಸಮುಖ್ಯಮುನಿಸಮ್ಮತದಿಂ
ಹರಿಸಂಕೀರ್ತನಮೊಂದೇ
ಪರಗತಿಗನುಕೂಲಮೆಂದು ನಿರವಿಸಿ ನೆಗಲ್ದಂ

ಪಾಲಂ ಬಯಸಿದ ರೋಗಿಗೆ
ಪಾಲಿಂದೌಷಧಮನೀವ ವೈದ್ಯನ ತೆಱದಿಂ
ದೀಲೋಗರೊಲ್ವ ಗೀತದ
ಮೂಲದೊಳೇ ಮುಕ್ತಿಗತಿಯ ಮೊಗದೋಱಸಿದಂ

ತೊಡರ್ದಿರೆ ನುಡಿನುಣ್ಚರಗಳ
ಬೆಡಂಗು ಮನಮೊಲ್ದು **ಗೀತಗೋಪಾಲ**ವೆಸ
ರ್ವಡೆದೊಳ್ಗನ್ನಡಗಬ್ಬಮ
ನೊಡರಿಸಿ ಚಿಕದೇವರಾಯನುನ್ನತಿವೆತ್ತಂ

ಈ ಕೃತಿಯ ಉತ್ತರಭಾಗದ ನಾಲ್ಕನೇ ಸಪ್ತಪದಿಯಲ್ಲಿ ಈ ಮಾತಿದೆ: 'ಈ ನಾಲ್ಕನೆಯ ಪಂಚಪದಿಯಲ್ಲಿ ಪ್ರಪನ್ನರು ಭಗವತ್ ಪರತಂತ್ರರಾಗಿ ಸ್ವಬುದ್ಧಿಯೂ ಸ್ವಪ್ರಯತ್ನವೂ ಇಲ್ಲದೆ ವಿಕಲಕರಣರಂತೆಯೂ ಅಚೇತನದಂತೆಯೂ ಇರುವುದರಿಂದ ಇವರನ್ನು ಕಾಪಾಡದಿದ್ದರೆ ತನಗೆ ಊನತ್ವ ಬರುವುದರಿಂದ ತಾನೇ **ಕಾಪಾಡುವ**ನೆಂಬುದನ್ನು ನಿರೂಪಿಸುವರು.'

ರಾಗ—ಶಂಕರಾಭರಣ, ಅಟ್ಟತಾಳ.

ತಪ್ಪದಾರದು—ತಿಳಿದು ನೋಡೆ ತಪ್ಪದಾರದು
ತಪ್ಪುನೆಪ್ಪುಗಳ ವಿಕಲ್ಪಿಸದೆಲ್ಲವ-
ನೊಪ್ಪುಗೆಯ್ದೆನ್ನನೊಲಿದು ಪಾಲಿಸು ಕೃಷ್ಣ ‖ ಪ ‖

ಆರಯ್ಯೆ ಮುಗ್ಗಿರಿವಂಥನ ತಪ್ಪೋ
ದಾಱದೋಱುವ ದಂಡಧಾರನ ತಪ್ಪೋ
ಮೇರೆಯಱಯದೆನ್ನ ಮೇಲಣ ತಪ್ಪೋ
ನಾರಾಯಣ ನಿನ್ನ ನಟಣೆಯ ತಪ್ಪೋ ೧

ತೊಂಡು ಮೇವ ಪಸುವಿಂಡಿನ ತಪ್ಪೋ
ಕಂಡು ಕಾಯದ ತುಱುಗಾವನ ತಪ್ಪೋ
ಗಂಡುಮೀಱುವೆನ್ನ ಗೆಯ್ಮೆಯ ತಪ್ಪೋ
ಕೊಂಡಾಳುವ ನಿನ್ನ ಕೂರ್ಮೆಯ ತಪ್ಪೋ ೨

ಬಾವಿಯ ಬಳಸುವ ಪಸುಳೆಯ ತಪ್ಪೋ
ತಾ ವಂದು ತಡೆಯದ ತಾಯದು ತಪ್ಪೋ
ಈ ವಿಷಯಕೆ ಮುಗ್ಗುವೆನ್ನದು ತಪ್ಪೋ
ಆವೇಳೆಗಾಪುಗೆಯ್ಯದ ನಿನ್ನ ತಪ್ಪೋ ೩

ಗುಱಿಯ ತಾಕದ ಮೊನೆಗೋಲಿನ ತಪ್ಪೋ
ಕುಱಿತೆಸೆಯದ ಬೀರಗುವರನ ತಪ್ಪೋ
ಬಱುಗೆಯ್ಮೆಗೆಯ್ವೆನ್ನ ಭಾವದ ತಪ್ಪೋ
ಅಱಿವುದೋಱಿಸದ ನಿನ್ನಾಟದ ತಪ್ಪೋ ೪

ಓಜೆಗುಂದುವ ವೀಣೆಯುಲುಹಿನ ತಪ್ಪೋ
ಬಾಜಿಸುವನ ಕೆಯ್ಯ ಪವಣಿನ ತಪ್ಪೋ
ರಾಜ ಶ್ರೀಚಿಕದೇವರಾಯನಿಗೊಲಿದ ಶ್ರೀ
ರಾಜಗೋಪಾಲ ನಿರಾಕರಿಸದೆ ಪೇೞು ೫

## ಕೆಲವು ಪದಗಳಿಗೆ ಅರ್ಥ

(ಇಲ್ಲಿನ ಸಂಖ್ಯೆಗಳು ಪುಟಗಳನ್ನು ಸೂಚಿಸುತ್ತವೆ.)

೧೭. ಆನಂದಮಯವಿಮಾನ — ಮೇಲುಕೋಟೆಯ ಚೆಲುವನಾರಾಯಣನ ಸನ್ನಿಧಿ. ಉದರ -ಒಳಗಡೆ. ವಿಸ್ಫಾರಿತ—ಹೊಳೆಯುವ. ನರಪತಿ—ಚಿಕದೇವೇಂದ್ರ. ವಿಮರ್ದಿತ—ಅಡಗಿಸಲ್ಪಟ್ಟ. ಅಹಿತಮಹೀಚಕ್ರ—ಶತ್ರುಗಳ ಭೂಮಂಡಲ. ಅನ್ಯೂನೋಪಾಯ—ಸಕಲವಾದ ಉಪಾಯ. ವಿಕುಂಠಿತ—ಮುರಿಯಲ್ಪಟ್ಟ. ಅರಿಧರಣೀಭೃತ್‌ದುರ್ಗವರ್ಗ — ಅಡಗಿಸುವುದಕ್ಕೆ ಕಠಿನವಾದ ಶತ್ರುರಾಜರುಗಳ ಗುಂಪು. ಯಾದವಶೈಲ—ಮೇಲುಕೋಟೆ. ಪದಾಂಭೋಜಾತ—ಪಾದಕಮಲ. ಭೃಂಗ—ದುಂಬಿ. ಆರಾಮ—ಮನೆ. ಪಶ್ಚಿಮರಂಗಧಾಮನಗರೀ—ಶ್ರೀರಂಗಪಟ್ಟಣ. ಉದ್ದಾಮ—ದೊಡ್ಡ. ಪ್ರೌಢಪ್ರವಾಳ—ಸಮರ್ಥವಾದ ಚಿಗುರು. ನೆಗಳಲಿ—ಉದ್ಯೋಗಿಸಲಿ. ಆಗರೆ—ಆಗ್ರಾ. ಒದವು—ಒದಗಿಸಿದ್ದು. ಪೆಂಪು—ಆಧಿಕ್ಯ. ಅಭಿಖ್ಯೆ—ಹೆಸರು, ಕೀರ್ತಿ. ಜಳ್ಳಿಸು—ಜಳ್ಳುಮಾಡು, ಸಾಮರ್ಥ್ಯವನ್ನು ನಾಶಮಾಡು. ಒಕ್ಕಲಿಕ್ಕು—ಬಡಿದು ನಾಶಮಾಡು. ಅಳ್ಳಿರಿವ—ಅದಿರುವ, ಮೆರೆಯುವ. ತೆಳ್ಳನೆಗೆಯ್—ಕರಗಿಸು. ಅಣಲು—ಅಂಗಳು, ಬಾಯೊಳಗಿನ ಮೇಲುಭಾಗ. ಮೇದಿನೀಚಕ್ರ—ಸುತ್ತಿನ ಭೂಮಿ.

೧೮.* ಮನ್ನೆಯರು—ಮಾನ್ಯರು. ಒಗ್ಗು—ಕೂಟ. ಬಾಳ್ವೆಣ—ಜೀವಚ್ಛವ. ಪಾಡುಪಂತ—ದೃಢ ನಿಶ್ಚಯ. ಅದಟು—ಪರಾಕ್ರಮ. ಗೊಂದಳ—ಗುಂಪು. ವಿಷ್ಣುಸ್ಯಂದನ—ವಿಷ್ಣುರಥ, ಗರುಡ.

---

* 'ಅಂದು ಇವನಿಂದ'—ಎಂಬುದನ್ನು ಹೀಗೆ ತಿದ್ದಿಕೊಳ್ಳಬೇಕು: "ಅಂದು ಇವನಿಂದ ಹೆದರಿ ಭಯದಿಂದ ಮಣಿದಿದ್ದ ನೃಪವೃಂದವಷ್ಟೂ ಭರದಿಂದ ಒಂದುಗೂಡಿ ಚೆನ್ನಾಗಿ ಸೇರಿ ಶಿವಾಜಿಗೆ ಮರ್ಮವನ್ನು ಅನುವಿಂದ ಹೇಳಲು, ಅವನು ಅಂದು ಅವರೊಡನೆ ಕೂಡಿ ಮೋಸದಿಂದ ಸಂದಣಿಯ ಕಾಳಗದಲ್ಲಿ ಒಂದಿಷ್ಟು ಮುಂದುವರಿಯಲು—ಹಾವುಗಳ ಗೊಂದಳವಲ್ಲಿ ವಿಷ್ಣುಸ್ಯಂದನದ ರೀತಿಯಲ್ಲೇ ಬಂದೆರಗಿ ಕೊಂದು ಕೊಲೆಯಾಡಿದ ಅಳವಿನಿಂದ ಚಿಕದೇವನೃಪನು ಇಂದು ಸುಖವಾಗಿ ಬಾಳುವನು.

ತಟ್ಟು—ಕುದುರೆ. ಪಂದಲೆ—ಆಗ ತಾನೆ ಕತ್ತರಿಸಿದ ತಲೆ. ಅಪ್ರತಿಪತ್ತಿ—ಅನಿಶ್ಚಯ. ಒಳ್ಪು—ಒಳ್ಳೆಯತನ. ಅಪ್ರಾಕೃತ—ಪರಮಾತ್ಮ.

೧೯. ಉದ್ವೃತ್ತಚರಿತ–ಮಿತಿಮೀರಿ ನಡೆಯುವವನು. ಉಕ್ಕಾಳು—ವೀರಪುರುಷ. ಜಳ್ಳುಮಾಡು—ಸಾಮರ್ಥ್ಯಕೆಡಿಸು. ಬಂಡುಗೈ—ಬೆಂಡು ಮಾಡು, ನಿಸ್ಸಾರವಾಗಿ ಮಾಡು. ಆಜಿರಂಗ—ಯುದ್ಧರಂಗ. ಓಜೆಗೆಡಿಸು — ಪ್ರಭಾವ ನಾಶಮಾಡು. ಸೇನಾನಿ — ಸೇನಾಪತಿ. ಘೋಟಕ—ಕುದುರೆ. ಖುರಪುಟ—ಗೊರಸು. ಅಣಲು—ಬಾಯೊಳಗಿನ ಮೇಲುಭಾಗ. ಕೇಣಗೊಳ್ಳು—ಮತ್ಸರದಿಂದ ಕಾಣು. ಅಂಡಲೆ—ಪೀಡಿಸು. ಕವರು—ಕಿತ್ತುಕೊ, ಬಗೆದುಕೊ. ಪೊಣರು—ಹೋರಾಡು.

೨೦. ರಾಜಕ—ಸಣ್ಣರಾಜ, ಪರರಾಜ. ಆರಯ್—ವಿಚಾರ ಮಾಡು. 'ಮಾಂ ಹಿ ಪಾರ್ಥ' ಇತ್ಯಾದಿ—ಅರ್ಜುನ, ನನ್ನನ್ನು ಆಶ್ರಯಿಸಿದವರು ಪಾಪದಲ್ಲಿ ಹುಟ್ಟಿದವರಾಗಲಿ, ಸ್ತ್ರೀಯರಾಗಲಿ, ವೈಶ್ಯರಾಗಲಿ, ಹಾಗೇ ಶೂದ್ರರಾಗಲಿ, ಅವರೂ ಪರಮವಾದ ಗತಿಗೆ ಹೋಗುವರು. ಸಂಗತಿಗೊಳಿಸು—ಹೊಂದಿಕೆಯಾಗಿ ಜೋಡಿಸು. ಅವಾಪ್ತಸಮಸ್ತಕಾಮ—ಸಮಸ್ತ ಕಾಮಗಳನ್ನು ಪಡೆದಂಥ. ಪರ, ವ್ಯೂಹ, ವಿಭವ, ಅಂತರ್ಯಾಮಿ, ಅರ್ಚಾವತಾರ ಎಂಬ ಭಗವಂತನ ಐದು ಪ್ರಕಾರಗಳನ್ನು ಮೊದಲನೆಯ ಬಿನ್ನಹದಲ್ಲಿ ವಿವರಿಸಿದೆ.

೨೧. ತಿಳಿಯಕೂಡದು—ತಿಳಿಯಲು ಆಗುವುದಿಲ್ಲ. ಪ್ರತಿಪಾದಿಸು—ಹೆಜ್ಜೆಹೆಜ್ಜೆಯಾಗಿ ತೋರಿಸು. ಮಿಥ್ಯೆ—ಸುಳ್ಳು. ಸ್ವಾಪ್ನ—ಕನಸಿಗೆ ಸಂಬಂಧಿಸಿದ. ಉಪಪಾದಿಸು—ಮತ್ತೆ ಹೇಳು. ಘಟಪಟಾದಿ ದೃಷ್ಟಾಂತ—ಗಡಿಗೆ ಬಟ್ಟೆಗಳ ಉದಾಹರಣೆ. ಶರೀರಕ—ಶರೀರವಾಗಿ ಉಳ್ಳವನು. ಅಪರಿಚ್ಛೇದ್ಯ — ಕತ್ತರಿಸಲಾಗದ, ಸಂಪೂರ್ಣವಾದ. ವೇದವೇದ್ಯ — ವೇದಗಳಿಂದ ತಿಳಿಯಲ್ಪಡುವವನು. ಅಘಟಿತಾರ್ಥಘಟಕ—ಹೊಂದಿಬರದ ಇಷ್ಟಾರ್ಥವನ್ನು ಹೊಂದಿಸುವವನು.

೨೨. ಬಗೆಗೊಳಿಸು—ಮನಸ್ಸಿಗೆ ಹಿಡಿಸುವಂತೆ ಹೇಳು. ಅರಿವುಗೊಳಿಸು—ತಿಳಿಸು. ಎದೆಗೊಳಿಸು—ಹೇಳಿ ಮೆಚ್ಚಿಸು. ಪ್ರಾಕೃತ—ಪ್ರಕೃತಿಯಿಂದ ಹುಟ್ಟಿದ.

೨೩. ನಿರವಧಿಕ — ಮಿತಿಯಿಲ್ಲದ. ಪ್ರತಿಕಟ್ಟು—ಸ್ಥಾಪಿಸು. ನಿರಿಗೆಗೊಳಿಸು—ಕ್ರಮವಾಗಿ ಜೋಡಿಸು. ದುರ್ಘಟ—ಕೂಡುವುದು ಕಷ್ಟ. ಸೊಲ್ಲಿಸು—ಹೇಳು.

೨೪. ಅಳುಕು — ಶಂಕೆಪಡು. ಮುಕ್ತಭೋಗ್ಯ— ಮುಕ್ತರು ಭೋಗಪಡಲು ತಕ್ಕದ್ದು. ಪರವಾಸುದೇವ—ವೈಕುಂಠದಲ್ಲಿರುವ ಈಶ್ವರ ತತ್ತ್ವ. ಊಳಿಗ—ಸೇವೆ.

೨೫. ಶ್ರಿಯಃಪತಿ—ಲಕ್ಷ್ಮೀಪತಿ. ಅಖಿಲದೋಷಪ್ರತ್ಯನೀಕ— ಎಲ್ಲ ದೋಷಗಳಿಗೂ ಶತ್ರುಸ್ಸೈನ್ಯವಾದವನು. ಮಹಿಷೀ—ರಾಣಿ. ವಿಷ್ವಕ್ಸೇನ—ದೇವಸೇನಾಪತಿ. ಒಡರಿಸು—ಉಂಟುಮಾಡು. ಕಳೇಬರ— ದೇಹ. ಎಡರು— ಮುಕ್ತಿಗೆ ಇರುವ ಅಡ್ಡಿ. ('ಕಳೇಬರಾದಿಗಳಿಂದ' ಎಂಬುದನ್ನು 'ಕರಣಕಳೇಬರಾದಿಗಳಿಂದ' ಎಂದು ತಿದ್ದಿಕೊಳ್ಳಬೇಕು.) ಪುರುಳು—ಸಾರ, ಆತ್ಮ. ತಕ್ಕದ್ದು, ಮಿಕ್ಕದ್ದು—ಯೋಗ್ಯ, ಯೋಗ್ಯವಲ್ಲದ್ದು. ಮೂರ್ತಿತ್ರಯ—ಬ್ರಹ್ಮ ವಿಷ್ಣು ಶಿವ. ಬಿಡುಗಣ್ಣರು— ದೇವತೆಗಳು. ಬೀಡು—ನೆಲೆ, ಸ್ವರ್ಗ.

೨೬. ತುರು—ಹಸು. ಮುಸು—ಕರಿಯ ಕಪಿ. ಎಸಗು— ಮಾಡು. ಅಷ್ಟಾಕ್ಷರೋಪದೇಶದೇಶಿಕ—'ಓಂ ನಮೋ ನಾರಾಯಣಾಯ' ಎಂಬ ಎಂಟಕ್ಷರದ ಮಂತ್ರವನ್ನು ಉಪದೇಶ ಮಾಡಿದವನು. ರೂಪಾಂತರ — ಬೇರೆ ರೂಪ. ಮಂಡನ — ಒಡವೆ. ಯದುಶಿಖರಿ ಶಿಖರ—ಯದುಗಿರಿಯ ತುದಿ. ಕಲ್ಲೋಲ—ಅಲೆ. ಕವಿಸು—ಮೇಲೆ ಮುಚ್ಚು. ಪರಿವಿಡಿ—ಕ್ರಮ. ಯದುಗೋತ್ರ—ಯದುಗಿರಿ.

೨೭. ಸವೆದು—ಮಾಡಿ. ಊಳಿಗ—ಸೇವೆ. ಏಕದೇಶ—ಒಂದು ಚೂರು. ಆಣ್ಮ—ಒಡೆಯ, ಸ್ವಾಮಿ. ಅಣ್ಮು—ಪರಾಕ್ರಮ. ಎರಕ— ಒಲವು. ಒರೆ—ಹೇಳು.

೨೮. ಪರಿಚ್ಛೇದಮಾಡು—ವಿಂಗಡಿಸಿ ತಿಳಿ.

೩೦. ನಿದಾನ—ವ್ಯಾಧಿಗೆ ಕಾರಣ. ಜಡರು—ಆಲಸ್ಯ. ಸುಕಲ —ಒಳ್ಳೆಯ ಕಲೆಗಳನ್ನು ಕಲಿತವನು.

೩೧. ಕೈವಾರಿ — ಹೊಗಳುವವರು. ನಾಡುಬೀಡುಗರು —

ನಾಡಿನಲ್ಲಿ ನೆಲಸಿರುವವರು. ವರ್ಣಾಶ್ರಮದವರು—ಬ್ರಹ್ಮ ಕ್ಷತ್ರ ವೈಶ್ಯ ಶೂದ್ರ ಎಂಬ ನಾಲ್ಕು ವರ್ಣದವರು; ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನ ಪ್ರಸ್ಥ, ಸಂನ್ಯಾಸ ಎಂಬ ನಾಲ್ಕು ಆಶ್ರಮದವರು. ವೇದೈಶ್ಚ ಸರ್ವೈಃ ಅಹ ಮೇವವೇದ್ಯಃ–ಎಲ್ಲಾ ವೇದಗಳಿಂದಲೂ ತಿಳಿಯಲ್ಪಡತಕ್ಕವನು ನಾನೇ.

೩೨. ಪ್ರತಿಬರಿಸಿ—ಪರಸ್ಪರ ವಿರುದ್ಧವಾಗಿ. ಉಪದೇಶದಲ್ಲಿ—ತಿಳಿದವರ ಉಪದೇಶದಲ್ಲಿ. ಹೊಟ್ಟೆಯಲ್ಲಿ ಹೂವುಳ್ಳವನು—ಕಮಲ ನಾಭ. ಅರಿನೃಪಾಲಮಸ್ತಕಶೂಲ—ಶತ್ರು ರಾಜರ ತಲೆಗೆ ಶೂಲನಾದ ಚಿಕದೇವರಾಜ. ಹೇಯು—ಜಿಗುಪ್ಸೆಯನ್ನುಂಟುಮಾಡುವ.

೩೩. ಅವಾಙ್ಮಾನಸಗೋಚರ—ಮಾತಿಗೂ ಮನಸ್ಸಿಗೂ ಕಾಣ ದವನು. ಹುಟ್ಟುಹೊಂದು—ಹುಟ್ಟುಸಾವು. ಆವಿರ್ಭವಿಸು—ರೂಪು ಗೊಳ್ಳು. ನಿರ್ವ್ಯಾಜ—ನೆಪವಿಲ್ಲದ, ಅಕಾರಣವಾದ. ನನ್ನಿಯ ನಲ್ಲ—ಸತ್ಯದಲ್ಲಿ ಪ್ರೀತಿಯುಳ್ಳವ. ಎಸೆ—ಕಾಂತಿಗೊಳ್ಳು.

೩೪. ನಿತ್ಯವಿಭೂತಿ—ವೈಕುಂಠದಲ್ಲಿನ ವೈಭವ. ಲೀಲಾವಿಭೂತಿ —ವ್ಯೂಹ, ವಿಭವು, ಅಂತರ್ಯಾಮಿ, ಅರ್ಚಾವತಾರಗಳ ವೈಭವ.

೩೫. ಅನುಗೊಳಿಸು—ಜೋಡಿಸು. ಮಲೆವರ ಗಂಡ—ಪ್ರತಿ ಭಟಿಸಿದವರನ್ನು ಅಡಗಿಸಿದ ವೀರ.

೩೬. ಪಲ್ಲಟಿಸು—ಕ್ರಮ ತಪ್ಪಿಸು. ತಟ್ಟು—ಸೈನ್ಯ ಸಮೂಹ. ಸೂಠಿ—ಚೂಟಿ, ವೇಗ. ಈಂಡು—ಕುಡಿ.

೩೭. ಉರೆ ನೆಗಳ್ದನು—ತುಂಬ ಕೆಲಸಮಾಡಿ ಕೀರ್ತಿಪಡೆದನು.

೩೮. ಕಟಕ—ಕಡಗ. ಮಕುಟ—ಕಿರೀಟ. ಸ್ವರ್ಣಕಾರ—ಅಕ್ಕಸಾಲೆ. ಮೃಣ್ಮಯ—ಮಣ್ಣಿನಿಂದಾದ. ಮೃತ್‌ಪಿಂಡ—ಮಣ್ಣಿನ ಉಂಡೆ.

೪೦. ಹದನು—ರೀತಿ. ಅಚ್ಚಳಿ—ಕಾಂತಿಕೆಡು.

೪೧. ಪುರುಳು—ದೇಹದೊಳಗಿನ ತಿರುಳಾದ ಆತ್ಮ. ಪೆಂಪುಗೈ —ಹೆಚ್ಚಿಸು. ಬೊಜಗದಲ್ಲಣ—ವಿಜಯಲಕ್ಷ್ಮಿಯ ಕಡೆಗೆ ವಿಟರಂತೆ ಬರು ವವರನ್ನು ತಲ್ಲಣಗೊಳಿಸುವವನು. ಕ್ಷ್ಮಾಭೃತ್—ಬೆಟ್ಟ. ಯದು ಕ್ಷ್ಮಾಭೃನ್ನಿಧಿ—ಯದುಗಿರಿಯ ಸಂಪತ್ಕುಮಾರ.

೪೩. ಕರಣ ಕಳೇಬರ—ಇಂದ್ರಿಯ ಮತ್ತು ದೇಹ.

೪೪. ಆಳಿಡು—ಸಮರ್ಥರನ್ನು ನೇಮಿಸು. ಗೈಸು—ಮಾಡಿಸು. ನಾಲ್ಮೊಗ—ಚತುರ್ಮುಖ ಬ್ರಹ್ಮ. ವ್ಯಾಸಂಗ—ವಿಶೇಷವಾದ ಆಸಕ್ತಿ. ದಯಾರ್ದ್ರ-ದಯೆಯಿಂದ ನೆನೆದ.

೪೫. ವೃತ್ತ—ಗುಂಡು. ಇಂಬು—ಅವಕಾಶ. ಅಂಡಭಿತ್ತಿ—ಬ್ರಹ್ಮಾಂಡದ ಗೋಡೆ. ತಾವು—ಸ್ಥಾನ. ಮೇಲ್ಮನೆಯ ಮರ್‍ಯಾದೆ—ಉಪ್ಪರಿಗೆಯ ಮಾದರಿ, ಒಂದರ ಮೇಲೆ ಒಂದು.

೪೬. ಸಯ್ಪು—ಪುಣ್ಯಕಾರ್‍ಯ. ಸಮೆ—ಮಾಡು. ನಿರ್ಣೀತ—ನಿರ್ಣಯಿಸಲ್ಪಟ್ಟದ್ದು. ಸಿಟ್ಟು—ದಿಕ್ಕು, ನೆಲೆ.

೪೭. ಚತುರಸ್ರ—ನಾಲ್ಕು ಮೂಲೆಯುಳ್ಳದ್ದು. ಸ್ವಾದೂದಕ—ಸವಿಯಾದ ನೀರು.

೪೮. ಎಸೆ—ಕಂಗೊಳಿಸು. ಕೈದು—ಆಯುಧ. ಒಳ್ಗಂಡ—ಮಹಾವೀರ. ನಿಖಿಲಭೋಗಪ್ರದ—ಎಲ್ಲ ಭೋಗಗಳನ್ನೂ ಕೊಡುವವನು.

೪೯. ಆಧಿ—ಮನಸ್ಸಿನ ರೋಗ. ವ್ಯಾಧಿ—ದೇಹದ ರೋಗ. ಸಂಕರ—ಬೆರಕೆ.

೫೦. ಸ್ವಾದು—ಸಿಹಿ. ಹಾಸರೆ—ಕಲ್ಲಿನ ಚಪ್ಪಡಿ.

೫೧. ನಿಷೇವಿತೆ—ಸೇವಿಸಲ್ಪಟ್ಟವಳು.

೫೨. ದೊಣೆ—ಬಂಡೆಯಲ್ಲಿ ನೀರು ನಿಲ್ಲುವ ಹಳ್ಳ. ಹನೇಮರ—ತಾಳೆಮರ. ಕಲ್ಲರೆ—ಕಲ್ಲುಚಪ್ಪಡಿ. ಅಂಬಿನ ಎಸುಗೆ—ಬಾಣ ಎಸೆದರೆ ಹೋಗುವ ದೂರ. ಹರವಿ—ಕೊಡ. ತೋರ—ದಪ್ಪ, ಗಾತ್ರ.

೫೩. ಹ್ರದ—ಕೊಳ. ನಿಷ್ಪಂಕದೀರ್ಘಿಕೆ—ಕೆಸರಿಲ್ಲದ ಉದ್ದವಾದ ಕೊಳ.

೫೪. ಉರುವಿಕ್ರಮ—ಮಹಾವಿಕ್ರಮ. ಭುಜಂಗ—ವಿಟ. ಇಸು—ಬಾಣದಿಂದ ಹೊಡೆ.

೫೬. ಕೇಣಸರ—ಅಸಹನೆ, ಅಸೂಯೆ.

೫೮. ಮೆಲ್ಲಿತ್ತು—ಮೃದುವಾದುದು. ತಳಸಿದ—ಮುಸೆದ. ಜರಿ-

ಇಳಿಜಾರು ಹಳ್ಳ. ಗುಂಬ—ಗಡಿಗೆ. ಶ್ವಾನ ಸೂಕರ ಖರ ಉಷ್ಟ್ರ—ನಾಯಿ, ಹಂದಿ, ಕತ್ತೆ, ಒಂಟೆ. ಯೋನಿ—ಜನ್ಮ.

೫೯. ಆಳ್ದನು—ಸ್ವಾಮಿ.

೬೦. ಘಂಟಾರ್ಥ—ಘಂಟೆ ಹೊಡೆದಂತೆ ಸ್ಪಷ್ಟವಾಗಿರುವುದು. ಎರಕ—ಒಲವು, ಪ್ರೀತಿ. ಸಮಾರಾಧಿತ—ಚೆನ್ನಾಗಿ ಆರಾಧಿಸಲ್ಪಟ್ಟವನು. ಇತರ—ಮುಕ್ತಿಯಲ್ಲದ್ದು, ಸಂಸಾರ. ಅನಿತರಭಕ್ತಕುಟುಂಬ—ತನ್ನನ್ನೇ ನಂಬಿದ ಭಕ್ತರನ್ನು ಕಟ್ಟಿಕೊಂಡವನು. ಎರಡಾರು—ಹನ್ನೆರಡು. ಓರಂತೆ—ಒಂದೇ ರೀತಿಯಾಗಿ. ಸೂರಿಸಮಾಜ—ಜ್ಞಾನಿಗಳ ಗುಂಪು. ಸೈ—ಸರಿ. ಆರ್ಪು—ಸಾಮರ್ಥ್ಯ. ಅರಿವು—ತಿಳಿವಳಿಕೆ. ಪುರುಳು—ಸತ್ತ್ವ.

೬೧. ಸಾತ್ತ್ವನಿಧಿ—ಸತ್ತ್ವವನ್ನು ನಿಧಿಯಾಗಿ ಉಳ್ಳವನು.

೬೨. ಅರ್ಥಪಂಚಕ ತತ್ತ್ವಜ್ಞಾನ — ಜೀವಾತ್ಮ ಸ್ವರೂಪ, ಪರಮಾತ್ಮ ಸ್ವರೂಪ, ಮೋಕ್ಷಸ್ವರೂಪ, ಮೋಕ್ಷೋಪಾಯ ಸ್ವರೂಪ ಮತ್ತು ಮೋಕ್ಷವಿರೋಧಿಸ್ವರೂಪ. ಜಾಯಮಾನಕಟಾಕ್ಷ—ಹುಟ್ಟಿದಾಗಲೇ ಪಡೆದ ಕರುಣೆಯ ಕಟಾಕ್ಷ. ದುರ್ಮತವಿಮರ್ದ—ಕೆಟ್ಟ ಮತಗಳನ್ನು ನಾಶಮಾಡುವ.

೬೪. ದೇವತಾಂತರ—ಅನ್ಯದೇವತೆಗಳು.

೬೫. ಪಂಡಿತಂಮನ್ಯರು—ಪಂಡಿತರೆಂದು ಭಾವಿಸಿಕೊಂಡಿರುವವರು. ದುರ್ಘಟ—ಹೊಂದಿಕೆಯಾಗದ್ದು.

೬೬. ನಿಃಸ್ಪೃಹ—ಆಸೆಯಿಲ್ಲದವ. ಬಲ್ಲರ ಬಲ್ಲಹ—ತಿಳಿದವರ ಒಡೆಯ.

೬೭. ಅಲ್ಲಗಳೆ—ತಿರಸ್ಕರಿಸು.

೬೮.* ಸಯ್ಪು—ಪುಣ್ಯ. ಇತರವಾದುದು—ಮುಕ್ತಿಯಲ್ಲದೆ ಬೇರೆ ಇಷ್ಟಾರ್ಥಗಳು. ಅಕೃತ್ಯಕರಣ—ಮಾಡಬಾರದ್ದನ್ನು ಮಾಡು

---

*'ಇತರವಾದುದನ್ನು ಔದಾಸೀನ್ಯ' ಎಂಬುದನ್ನು ಹೀಗೆ ತಿದ್ದಿಕೊಳ್ಳಬೇಕು: "(ನಿನ್ನಲ್ಲಿ) ಔದಾಸೀನ್ಯ ತೋರುವುದರಿಂದ ಇತರ(ವಾದ ಸಂಸಾರ)ವನ್ನೂ (ನಿನ್ನಲ್ಲಿ) ಆದರ ತೋರುವುದರಿಂದ ಮುಕ್ತಿಪದವನ್ನೂ ಅವರಿಗೆ ನೀನು ಕೊಡುವೆ—ಎಂದು . . . ಒರೆದನು."

ವುದು. ಕೃತ್ಯಾಕರಣ — ಮಾಡಬೇಕಾದ್ದನ್ನು ಮಾಡದಿರುವುದು. ಭುಜಿಸು—ಅನುಭವಿಸು.

೬೯. ಸಂಸಾರಿ—ಹುಟ್ಟುಸಾವು ಉಳ್ಳವನು. ಮುಮುಕ್ಷು—ಮೋಕ್ಷವನ್ನು ಬಯಸುವವನು. ನಿತ್ಯಮುಕ್ತರು— ನಿತ್ಯರು ಮತ್ತು ಮುಕ್ತರು. ಪೊಗರು—ಪ್ರಭಾವ. ಕಲ್ಯಾಣತೀರ್ಥನಿಲಯ—ಮೇಲು ಕೋಟೆಯ ದೇವರು.

೭೦ ಕರ್ಮಠ --ವೇದೋಕ್ತವಾದ ಕರ್ಮಮಾಡುವವನು.

೭೧. ಸೊಮ್ಮು—ಸಂಪಾದಿಸಿದ್ದು. ಕಡೆಹಾಯಿ—ಸಂಸಾರ ವನ್ನು ದಾಟು.

೭೨.* ಉಪಾಯ—ಯಾವುದರಿಂದ ಗುರಿ ಮುಟ್ಟುತ್ತೇವೆಯೋ ಅದು. ಉಪೇಯ—ಯಾವ ಗುರಿಯನ್ನು ಮುಟ್ಟುತ್ತೇವೆಯೋ ಅದು. ಅನನ್ಯಗತಿ—ಬೇರೆ ಯಾವ ಗತಿಯೂ ಇಲ್ಲದವನು. ಮನ್ನೆಯ ಬಲ್ ವಗೆಯ ಬಂದಿಕಾರ—ಮಾನ್ಯರಾದ ದೊಡ್ಡ ಹಗೆಗಳನ್ನು ಸೆರೆಹಿಡಿಯು ವವನು. ಅಳುಕು—ಭೀತಿಪಡು. ಇರವು—ಸ್ಥಿತಿ.

೭೩. ದಟ್ಟಿಗಟ್ಟಿಸು—ಉದ್ಯೋಗಮಾಡಲು ನಿಶ್ಚೈಸು. ಬರಸೆಳೆ —ತನ್ನ ಕಡೆಗೆ ಬರುವಂತೆ ಎಳೆದುಕೊ. ಅಕಿಂಚನರು—ತಮ್ಮದಾಗಿ ಏನೂ ಇಲ್ಲದವರು. ಕಾಪು—ರಕ್ಷೆ.

೭೪. ಪವಣಿಸು—ಹೊಂದಿಸು. ಸನ್ನಿಕೃಷ್ಣ—ಹತ್ತಿರ ಬಂದ. ಪ್ರಸಕ್ತಿ—ಅಂಟಿಕೊಳ್ಳುವಿಕೆ.

೭೬. ಅಡಸಿದ ಎಡರು—ಉಂಟಾದ ತೊಂದರೆ. ಕದುಬು—ಕಳವಳ, ಉದ್ವೇಗ. ಕಟ್ಟೆರಕ—ಗಾಢವಾದ ಪ್ರೀತಿ.

೭೭. ಆಳ್ಗೊಳ್ಳು—ಸ್ವಾಮಿಯಾಗು.

---

*'ನಿನ್ನ ಇರವಿನಿಂದ ತಿಳಿವನ್ನು ಅಳತೆ ಮಾಡಿಕೊಳ್ಳುವನು' ಎಂಬುದನ್ನು 'ನಿನ್ನ ಇರವನ್ನು ತಿಳಿವವನು ಸಮರ್ಥನಾಗುವನು' ಎಂದು ತಿದ್ದಿಕೊಳ್ಳಬೇಕು.